


# ಅಚಲ

ಸಂಪುಟ 12
ಸಂಚಿಕೆ 1

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ದ್ವೈಮಾಸಿಕ

ಮಾರ್ಚ್ - 1998
ಬೆಂಗಳೂರು

ಚಂದಾ ಮತ್ತು ಲೇಖನಗಳನ್ನು
ಕಳುಹಿಸುವ ವಿಳಾಸ

ಸಂಪಾದಕರು
ಅಚಲ
ಬಿ-30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್
1ನೇ ಮುಖ್ಯರಸ್ತೆ, 9ನೇ ಕ್ರಾಸ್
ವಿಜಯನಗರ ಎರಡನೇ ಹಂತ,
ಬೆಂಗಳೂರು - 40

ಬೆಲೆ
ಬಿಡಿ ಪ್ರತಿ - 4 ರೂ.
ವಾರ್ಷಿಕ ಚಂದಾ - 25 ರೂ.
ಅಜೀವ ಚಂದಾ - 200 ರೂ.
(ಸಂಸ್ಥೆಗಳಿಗೆ) - 250 ರೂ.

ಒಳಪುಟಗಳಲ್ಲಿ





ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ
ಡಾ॥ ಬಿ.ಎನ್. ಸುಮಿತ್ರಾಬಾಯಿ
ಶಾಂತಾ ನಾಗರಾಜ್

ಪ್ರಕಾಶಕರು
ಜಾಗೃತಿ ಮಹಿಳಾ
ಅಧ್ಯಯನ ಕೇಂದ್ರ
ಬೆಂಗಳೂರು

ವಿಮರ್ಶೆಗಾಗಿ ಪುಸ್ತಕಗಳನ್ನು
ಕಳುಹಿಸುವವರು ದಯವಿಟ್ಟು
ಎರಡು ಪ್ರತಿಗಳನ್ನು
ಕಳುಹಿಸಬೇಕು

ಚಂದಾ ಹಣವನ್ನು ಚೆಕ್‌ನಲ್ಲಿ
ಕಳುಹಿಸುವವರು ರೂ. 10/=
ಬ್ಯಾಂಕ್ ಕಮಿಷನ್ ಸೇರಿಸಿ
ಕಳುಹಿಸಬೇಕು

ಎಂ.ಓ. ಫಾರ್ಮಿನ ಕೊನೆಯ
ಭಾಗದಲ್ಲಿ ತಮ್ಮ ಹೆಸರು
ವಿಳಾಸಗಳನ್ನು ಸ್ಪಷ್ಟವಾಗಿ
ನಮೂದಿಸ ಬೇಕು

ಬದಲಾದ ವಿಳಾಸಗಳನ್ನು
ದಯವಿಟ್ಟು ಬರೆದು ತಿಳಿಸಿ.

## Statement about ownership and other particulars about Newspaper ACHALA

### FORM IV (see Rule 8)

| | | | |
|---|---|---|---|
| 1. | Place of Publication | : | Bangalore, Karnataka State |
| 2. | Periodicity of Publication | : | Bi-monthly |
| 3. | Printers Name Address | : | Akshara Printers, 54/4, Police Station Road, Basavanagudi, Bangalore - 560 004. |
| 4. | Publishers Name | : | Dr. G. Ramakrishna for Jagruthi Mahila Adhyayana Kendra, Bangalore |
| | Nationality | : | Indian |
| | Address | : | 713, Vijaya Mansion, I Main, R.P.C. Layout, Bangalore - 560 070. |
| 5. | Editors Name | : | N. Gayathri |
| | Nationality | : | Indian |
| | Address | : | 713, Vijaya Mansion, I Main, R.P.C. Layout, Bangalore - 560 040. |
| 6. | Name & Address of individuals who own the News Paper | : | Jagruthi Mahila Adhyayana Kendra 713, Vijaya Mansion, I Main, R.P.C. Layout, Bangalore - 560 040. |

I, Dr. G. Ramakrishna, hereby declare that the particulars given above are true to the best of my knowledge and belief.

Bangalore
Date : 1.3.98

Sd/-
**Dr. G. Ramakrishna**

# ಮಹಿಳಾ ಹೋರಾಟಕ್ಕೆ ಸಂದ ಜಯ

ಕ್ವಿನಕ್ರೀನ್ ಗುಳಿಗೆಗಳನ್ನು ಸಂತಾನಹರಣದ ಉದ್ದೇಶಕ್ಕಾಗಿ ಬಳಸಲಾಗುತ್ತಿದ್ದ ಪದ್ಧತಿಗೆ ನಿಷೇಧ ಹೇರಿರುವ ಇತ್ತೀಚಿನ ಸುಪ್ರೀಂ ಕೋರ್ಟಿನ ಆದೇಶ ಸುವ್ಯವಸ್ಥಿತವಾದ ಮಹಿಳಾ ಹೋರಾಟಕ್ಕೆ ಸಂದ ಜಯವಾಗಿದೆ.

ಸ್ತ್ರೀಯರ ಸಂತಾನ ನಿರೋಧಕ್ಕಾಗಿ ಬಳಸುವ ರಾಸಾಯನಿಕ ವಿಧಾನವೇ ಕ್ವಿನಕ್ರೀನ್. ಕ್ವಿನಕ್ರೀನ್ ಬಗ್ಗೆ ವ್ಯವಸ್ಥಿತ ರೀತಿಯಲ್ಲಿ ಯಾವುದೇ ಕರಾರುವಾಕ್ಕಿನ ಅಧ್ಯಯನ ನಡೆದಿಲ್ಲವಾದ ಕಾರಣ, ಅದರ ಉಪಯುಕ್ತತೆಯ ಬಗ್ಗೆ ಮನವರಿಕೆ ಮಾಡಿಕೊಡುವುದು ಕಠಿಣವೇ ಆಗಿದೆ. ಆದರೆ ಅದರ ಉಪಯುಕ್ತತೆಯನ್ನು ಅಲ್ಲಗೆಳೆಯುವಂತಹ ತೊಂದರೆಗಳಿಂದ ಗರ್ಭಧಾರಣೆ, ಗರ್ಭನಳಿಕೆಯ ಕ್ಯಾನ್ಸರ್ ಹಾಗೂ ಗರ್ಭಾಶಯ ಸಂಬಂಧಿತ ಇತರ ತೊಂದರೆಗಳು ಕಾಣಿಸಿಕೊಳ್ಳುತ್ತವೆ - ಎಂಬುದು ಮಾತ್ರ ನಿರ್ವಿವಾದವಾಗಿದೆ.

ವೈದ್ಯಕೀಯವಾಗಿ ಇರುವ ಕಾಳಜಿಗಳಲ್ಲದೆ ಸಾಮಾಜಿಕ ಪರಿಣಾಮಗಳ ದೃಷ್ಟಿಯಿಂದಲೂ ಮಹಿಳೆಯರ ಸಂತಾನಹರಣದ ಸಾಧನವಾಗಿ ಕ್ವಿನಕ್ರೀನ್ ಬಳಸುವುದನ್ನು ಭಾರತವೂ ಸೇರಿದಂತೆ ವಿಶ್ವದ ಹಲವಾರು ಮಹಿಳಾ ತಂಡಗಳು ನಾಲ್ಕು ವರ್ಷಗಳಿಂದ ಸತತವಾಗಿ ಪ್ರತಿಭಟಿಸುತ್ತಾ ಬಂದಿವೆ. ಕಲ್ಕತ್ತೆಯಲ್ಲಿ ಗಣತಾಂತ್ರಿಕ ಮಹಿಳಾ ಸಮಿತಿಯು ಮಲ್ಲಿಕ್‌ನನ್ನು ಕ್ವಿನಕ್ರೀನ್ ಬಳಸದಂತೆ ನಿರ್ಬಂಧಿಸಿತ್ತು. ದೆಹಲಿಯ ಅಖಿಲ ಭಾರತ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆ, ಮಹಿಳಾ ಅಭಿವೃದ್ಧಿ ಅಧ್ಯಯನ ಕೇಂದ್ರ, ಜಂಟಿ ಮಹಿಳಾ ಕಾರ್ಯಕ್ರಮ, ಸಹೇಲಿ - ಮುಂತಾದ ಸಂಘಟನೆಗಳು ಜೈನ್ ಆರೋಗ್ಯ ಕೇಂದ್ರದೆದುರು ಜಂಟಿಯಾಗಿ ಪ್ರತಿಭಟನೆಯನ್ನು ನಡೆಸಿ ಕ್ವಿನಕ್ರೀನ್ ಹಿಂದೆ ಇರುವ ಆತನ ಪಾತ್ರವನ್ನು ಖಂಡಿಸಿವೆ. ಅಖಿಲ ಭಾರತ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆ ಮತ್ತು ಡಾ। ಮೋಹನರಾವ್ ಜಂಟಿಯಾಗಿ ಈ ವಿಷಯದ ಬಗ್ಗೆ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಯನ್ನು ಸುಪ್ರೀಂ ಕೋರ್ಟಿನಲ್ಲಿ ಹೂಡಿದ್ದು ಈಗ ಅದರ ತೀರ್ಪು ಹೊರಬಿದ್ದಿದೆ. ಮಾರ್ಚ್ 16 ರಂದು ಸುಪ್ರೀಂ ಕೋರ್ಟು ಭಾರತದ ಔಷಧೀಯ ನಿಯಂತ್ರಣಾಧಿಕಾರಿಗಳಿಗೆ ನೀಡಿರುವ ಆದೇಶದನ್ವಯ ಔಷಧ ನಿಯಂತ್ರಣಾಲಯವು ಈ ಮದ್ದನ್ನು ನಿಷೇಧಿತ ಮದ್ದೆಂದು ಪರಿಭಾವಿಸಿ ಇದರ ಮಾರಾಟ, ಬಳಕೆ ಮತ್ತು ಪ್ರಚಾರ - ಎಲ್ಲವನ್ನೂ ನಿಲ್ಲಿಸುವ ನಿರ್ಧಾರ ಕೈಗೊಂಡಿದೆ. ಇಂತಹ ನಿರ್ಧಾರವನ್ನು ನ್ಯಾಯಾಲಯ ಮತ್ತು ಭಾರತದ ಔಷಧ ನಿಯಂತ್ರಣಾಲಯವು ನಿರ್ಧಾರ ತಳೆಯುವಲ್ಲಿ ಮಹಿಳಾ ಸಂಘಟನೆಗಳ ಹೋರಾಟದ ನಿರ್ಧಾರ ಪ್ರಮುಖ ಪಾತ್ರ ವಹಿಸಿದೆ.

ಬೆಂಗಳೂರಿನಲ್ಲೂ ವೈದ್ಯರಾದ ಪ್ರವೀಣ್ ಕಿಣಿ, ಸೀತಾ ಭತೀಜಾ ಮುಂತಾದವರು ಅವರ ಚಿಪ್‌ಟ್ರಸ್ಟ್ ಮೂಲಕ ಪ್ರಚಾರ ಮತ್ತು ಪ್ರಸಾರ ಮಾಡಬಯಸಿದ ಈ ಮದ್ದಿಗೆ ಅರ್ಧ ಚಂದ್ರ ಪ್ರಯೋಗವಾಗಿದೆಯೆನ್ನುವುದು ಸಂತೋಷದ ವಿಷಯವಾದರೂ ಇವರು ಈಗಾಗಲೇ ತರಬೇತಿಕೊಟ್ಟದ್ದೇವೆಂದು ಕೊಚ್ಚಿಕೊಳ್ಳುವ ನೂರಾರು ವೈದ್ಯರು, ಸೂಲಗಿತ್ತಿಯರು ಹಾಗೂ ದಾದಿಯರು ಹಳ್ಳಿಗಾಡಿನ ಮೂಲೆ ಮೂಲೆಯ ಹೆಂಗಸರನ್ನು ಹುಡುಕಿ ಕುಟುಂಬ ಕಲ್ಯಾಣ ಯೋಜನೆಯನ್ನು ನಡೆಸಿದ್ದೇ ಆದಲ್ಲಿ ಕ್ವಿನಕ್ರೀನ್‌ನ ಭಯಂಕರ ಪರಿಣಾಮವನ್ನು ಯಾರೂ ಊಹಿಸಲಾಗದು. ಆದ್ದರಿಂದಲೇ ಜನಸಮುದಾಯದಲ್ಲಿ ಈ ಮದ್ದಿನ ದುಷ್ಪರಿಣಾಮಗಳನ್ನು ಕುರಿತಂತೆ ಜನಜಾಗೃತಿಯನ್ನು ಮೂಡಿಸುವ ಕೆಲಸವು ಜೊತೆ ಜೊತೆಯಲ್ಲಿ ಸಾಗಬೇಕಾಗಿದೆ. ಬೆಂಗಳೂರಿನಲ್ಲಿ ಕಳೆದ ಆರು ತಿಂಗಳಲ್ಲಿ ಮಹಿಳಾ ಸಂಘಟನೆಗಳು ನಡೆಸಿದ ಪ್ರತಿಭಟನೆಗಳು, ತಂದ ಒತ್ತಡಗಳೂ ಕೂಡ ಸುಪ್ರೀಂ ಕೋರ್ಟಿನ ಈ ತೀರ್ಪಿಗೆ ಕಾರಣವಾಗಿವೆ.

ಮಹಿಳೆಯ ಸಂತಾನಹರಣ ಶಕ್ತಿಯ ನಿಯಂತ್ರಣದತ್ತ ಇತ್ತೀಚೆಗೆ ನಡೆಯುತ್ತಿರುವ ಹಲವಾರು ಸಂಶೋಧನೆಗಳ ಮಾನವೀಯ ಆಯಾಮಗಳತ್ತ ಮತ್ತೊಮ್ಮೆ ದೃಷ್ಟಿ ಹರಿಸಬೇಕಾಗಿದೆ. ಅಂತರರಾಷ್ಟ್ರೀಯ ಜಾಲವೊಂದು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿನ ಜನಸಂಖ್ಯೆಯನ್ನು ನಿಯಂತ್ರಿಸುವ ಸಂಚಿನಲ್ಲಿ ಈ ದೇಶಗಳ ಬಡಹೆಂಗಸರ ಜೀವಗಳನ್ನು ತೀರ ಅಪಾಯಕ್ಕೊಡ್ಡಲಾಗಿದೆ. ಇದರ ಬಗ್ಗೆ ಸರ್ಕಾರದಷ್ಟೇ ಸಾರ್ವಜನಿಕರ ಮಧ್ಯೆ ಪ್ರವೇಶಿಸುವಿಕೆಯೂ ಅತ್ಯಂತ ಅಗತ್ಯ.

ಜನಗಳ ಆರೋಗ್ಯ ಮತ್ತು ಹಿತದ ರಕ್ಷಣೆಗೆ ತಾನು ಬದ್ಧವೆಂದು ಸರ್ಕಾರ ಹೇಳಿಕೊಳ್ಳುತ್ತದೆ. ಅದನ್ನು ನಿಜವಾಗಿಸಬೇಕಾದರೆ ಸದ್ಯದಲ್ಲಿರುವ ಆರೋಗ್ಯ ವ್ಯವಸ್ಥೆಯನ್ನು ಛಿದ್ರಗೊಳಿಸದಿರಬೇಕಾದದ್ದು ಅನಿವಾರ್ಯ. ಜೊತೆಗೆ, ಪ್ರಾಥಮಿಕ ಆರೋಗ್ಯ ಸೇವೆಯು ದೇಶದ ಎಲ್ಲ ಭಾಗಗಳಲ್ಲೂ ವ್ಯವಸ್ಥಿತವಾಗಿ ದೊರಕುವಂತೆ ಮಾಡಬೇಕಾದ ಕರ್ತವ್ಯವೂ ಸರ್ಕಾರದ್ದಾಗಿದೆ. ಸರ್ಕಾರದ ಈ ಕರ್ತವ್ಯವನ್ನು ಎಚ್ಚರಿಸುವಲ್ಲಿ ಮಹಿಳಾ ಸಂಘಟನೆಗಳು ಮಹತ್ವದ ಪಾತ್ರ ವಹಿಸಬೇಕಾಗುತ್ತದೆ.

- ಎನ್. ಗಾಯತ್ರಿ

# ಅಪ್ಪಂದಿರನ್ನು ಕೊಳ್ಳಬೇಕು ಬೆಲೆಯೆಷ್ಟು ?

ಅಪ್ಪಂದಿರನ್ನು ಕೊಳ್ಳಬೇಕು ಬೆಲೆಯೆಷ್ಟು ?
ರೊಟ್ಟಿಗಳಿಗೆ ಬೆಲೆಯಿದೆ
ನೋಟಗಳಿಗೆ ಹಗುರವಾಗುತ್ತ ಗಾಳಿಗೆ ಹಾರುವ ನಮ್ಮ ಬಟ್ಟೆಗೆ ಬೆಲೆಯಿದೆ
ಅಪ್ಪಂದಿರು ಬೇಕು, ಕಿಲೋ ಎಷ್ಟು ?

ಅಮ್ಮನ ಮೈ ಮೇಲಿನ ಬಾಸುಂಡೆಗಳಲ್ಲಿ
ಅಪ್ಪ ಮಾಡಿದ್ದು ಎಷ್ಟನೆಯ ಗಾಯವಾದರೂ
ಗಾಯಗಳ ಮೇಲೆ ನಾಳೆ ಮುತ್ತುವ ನೊಣಗಳಲ್ಲಿ
ಅಪ್ಪನ ಇರುವಿಕೆ ಎಷ್ಟನೆಯ ಕ್ರಿಮಿಯಾದರೂ
ನಂಬಿ, ನಂಬಿ, ನಂಬಿಕೆಗಳು ಬತ್ತಿಹೋದ ನಮ್ಮ ಹುಡುಗನಿಗೆ
ತಂದೆತನ ಎಷ್ಟೆಷ್ಟೋ ಸುಳ್ಳಾದರು
ಶಾಲೆಗೆ ಹೋಗಿ ನಾಲ್ಕು ಅಕ್ಷರಗಳು ಕಲಿಯುವುದಕ್ಕೆ
ಅಪ್ಪಂದಿರನ್ನು ತೋರಿಸಬೇಕು, ಕಿಲೋ ಎಷ್ಟು ?

ಮರದಂತಹ ನಮ್ಮ ಅಮ್ಮನ ಕೊಂಬೆಗಳು ಮುರಿದು
ಒಣಸೌದೆಯಂತೆ ಮಂಚದ ಮೇಲೆ ಸೀಳುವಾಗ
ಬಾಗಿಲಾಚೆ ನಿತ್ರಾಣವಾಗುರುಳಿದ ನನ್ನ ಎಳೆತನಕ್ಕೆ
ಯಾರೋ ಕಲಿಸಿದ ಅಫೀಮು ರುಚಿ ಅಪ್ಪ ಕೊಟ್ಟಿದ್ದಲ್ಲ.
ದಡದಲ್ಲಿ ಬಿಸಾಡಿದ ದದ್ದು ದೋಣಿಯಂತೆ
ಇಡೀ ದಿನ ನಿದ್ದೆ ಮಾಡುವ ಅಮ್ಮನ ಹೊಟ್ಟೆಯಲ್ಲಿ ತಲೆತೂರಿಸಿ
ರಾತ್ರಿಯಾಗಬಾರದೆಂದು ನಾನು ಮಾಡುವ ಪ್ರಾರ್ಥನೆಗೆ ಅಪ್ಪನ ಪೀಡೆ ತೊಲಗದು.

ಹತ್ತು ವರ್ಷಕ್ಕೇ ಸೆರಗು ಹಾಸಿ ಕಣ್ಣು ಹೊಡೆಯುವುದನ್ನು ಕಲಿಸಿದ ನಮ್ಮ ಹಸಿವಿಗೆ
ಅಪ್ಪನ ರಾಜಮುದ್ರೆ ಬೇಕಿಲ್ಲ.
ಶಾಲೆಗೆ ಹೋಗಿ ನಾಲ್ಕು ಅಂಕಿಗಳು ಕಲಿಯಲು
ಅಪ್ಪಂದಿರನ್ನು ತರಬೇಕು, ಕಿಲೋ ಎಷ್ಟು ?

ಒದೆಯುತ್ತಾ, ಮಾರುತ್ತ ಈ ದಂಧೆಗೆ ಸೇರಿಸಿದವರಲ್ಲಿ,
ದಂಧೆ ಮಾಡಿದ್ದಕ್ಕೆ ಜೈಲಿನಲ್ಲಿ ಗುದ್ದಿ ಜುಲ್ಮಾನೆ ವಸೂಲಿ ಮಾಡಿದವರಲ್ಲಿ
ಎಲ್ಲಿಯೋ ಒಂದು ಕಡೆ ಬಿಲದಲ್ಲಿಯೋ ಹುತ್ತದಲ್ಲಿಯೋ ಗವಿಯಲ್ಲಿಯೋ
ಅಪ್ಪಂದಿರು ಇದ್ದೇ ಇರುತ್ತಾರೆ.

ಮರ್ಯಾದಸ್ತರೆಲ್ಲ ಅವರ ಅಪ್ಪಂದಿರಿಗೇ ಹುಟ್ಟುತ್ತಾರಂತೆ !
ನಾವು ಅಮ್ಮನ ಹೊಟ್ಟೆಯಲ್ಲಿ ಹುಟ್ಟುತ್ತೇವೆ
ಶಾಲೆಗೆ ಹೋಗಿ ಗುಣಾಕಾರ ಒಪ್ಪಿಸಬೇಕೆಂದರೆ
ಅಪ್ಪಂದಿರನ್ನು ಕೊಳ್ಳಬೇಕು, ಕಿಲೋ ಎಷ್ಟು ?

ಅಪ್ಪಾ ಎಂದರೆ ಕತ್ತಲೆ ದೆವ್ವಗಳು ಗುಂಪುಗೂಡಿದ ಜಾಗದಲ್ಲಿ
ಅಪ್ಪಂದಿರೆಂದರೇನೆ ಹುಟ್ಟದ ನಮ್ಮ ತಂಗಿಯರಿಗೂ ಕೂಡ ತಪ್ಪದ ಗಿರಾಕಿಗಳಾದ ಜಾಗದಲ್ಲಿ
ಬೇಯಿಸಿದ ಅನ್ನವನ್ನು ಹಾರಿಸಿಕೊಂಡು ಹೋಗುವ ಕಜ್ಜಿ ನಾಯಿಗಳನ್ನು ಓಡಿಸಿದಂತೆ
ಕಣ್ತುಂಬ ತುಂಬಿಕೊಂಡ ನಮ್ಮ ನಿದ್ದೆಯನ್ನು ಹಾರಿಸಿಕೊಂಡು ಹೋಗುವ ಅಪ್ಪಂದಿರನ್ನು ಓಡಿಸಲಾಗದೆ ?
ಯಾವ ಪ್ರಾಣಿಯ ಹೆಸರಿನಲ್ಲಿ ಬೈದರೂ,
ಆ ಪ್ರಾಣಿ ನಾಚಿಕೆಯಿಂದ ಮುದುಡಿಹೋಗುವ ಜಾಗ
ಶಾಲೆಗೆ ಹೋಗಿ ಒಂದಷ್ಟು ಕಾಗುಣಿತ ಕಲಿಯಬೇಕೆಂದರೆ
ಅಪ್ಪಂದಿರು ಇಳಿದು ಬರಬೇಕು, ಕಿಲೋ ಎಷ್ಟು?

ಕಿಕ್ಕಿರಿದ ನಿಮ್ಮ ಶಾಲೆಯ ರಿಜಿಸ್ಟರಿನಲ್ಲಿ
ರಾಮನೆಂದೋ, ರಹೀಮನೆಂದೋ ಕರುಣಾಮಯನೆಂದೋ
ದೇವರ ಅವತಾರಗಳನ್ನು ಧರಿಸಿಕೊಂಡ ಅಪ್ಪಂದಿರಲ್ಲಿ
ನಮ್ಮತ್ತ ಕೋಡಿಗಳು ಕೋರೆಗಳು ಹಾಯುವ ಹಗಲುವೇಷದ ಅಪ್ಪಂದಿರಾರೊ,
ಬರೆಯಬಲ್ಲಿದರೆ ಬರೆದುಕೊಳ್ಳಿ
ಬದುಕು ನೆರಳಂತೆ ಶಾಲೆಯ ಕಪ್ಪುಹಲಗೆಗಳ ಮೇಲೆ
ನಮ್ಮ ಉಗುಳಿಂದ ಬರೆಸಿ ಪುನೀತ ಮಾಡಿದ ಮೇಲೆ
ನರನರಗಳಲ್ಲಿ ತುಂಡಾದ ವಿಷರಕ್ತಬಿಂದುವಿನ ಹೆಸರು
ನೀಚನೆಂದೋ, ಮಾರೀಚನೆಂದೋ ಖಡ್ಗಮೃಗವೆಂದೋ
ಕ್ರಿಮಿಕೀಟವೆಂದೋ
ಬಳಕೆಯಿಂದ, ರೂಢಿಯಿಂದ
ಅಕ್ಷರದೋಷವಿಲ್ಲದೆ ಬರೆದುಕೊಳ್ಳಿ

(ಹೈದರಾಬಾದಿನ ಮೆಹಂದಿ ಬಜಾರಿನ ವೇಶ್ಯೆಯರು ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸಲು ಹೋದಾಗ ಅಲ್ಲಿ ತಂದೆ ಹೆಸರು ಕೇಳುತ್ತಿದ್ದಾರೆಂದು ತಿಳಿದು ನಿರಸನ ಪ್ರಕಟಿಸುತ್ತಾ ಈ ಕವನ ರಚಿಸಲಾಗಿದೆ)

*ಮೂಲ ತೆಲುಗು ಕವಿತೆ : ಕವಯಿತ್ರಿ - ಕೊಂಡೇಪೂಡಿ ನಿರ್ಮಲ*
*ಕವಿತೆಯ ಶೀರ್ಷಿಕೆ - ನಾನ್ನಲ್ಲಿ ಕೊನಾಲಿ ರೇಟೆಂತ ?*
*ಕನ್ನಡ ಅನುವಾದಕರು - ಪ್ರೊ. ಘಟ್ಟಮರಾಜು*

# 'ವಿಮುಕ್ತಿಯ ಹಾದಿ'ಯ ಸುತ್ತ

*ಡಾ. ಎಚ್. ಎಸ್. ರಾಘವೇಂದ್ರರಾವ್*

ಶ್ರೀಮತಿ ಸಾವಿತ್ರಮ್ಮನವರು ಅನುವಾದಿಸಿದ, ಟ್ಯಾಗೋರರು ಬರೆದ 'ಮನೆಜಗತ್ತು' ಕಾದಂಬರಿಯ ಕೆಲವು ಮಾತುಗಳಿಂದ ಪ್ರಾರಂಭಿಸುವುದಕ್ಕೆ ಇಷ್ಟಪಡುತ್ತೇನೆ. ಏಕೆಂದರೆ ಇವತ್ತಿನ ನಮ್ಮ ಸನ್ನಿವೇಶ, ಅವರು ಬರೆದ ಕಾದಂಬರಿಯನ್ನು ಬರೆದ ಸನ್ನಿವೇಶ, ಮತ್ತೆ ಯಾಕೆ ನಮಗೆ ಸಾವಿತ್ರಮ್ಮನವರ ಬರವಣಿಗೆ ಮುಖ್ಯ ಆಗುತ್ತೆ ಎನ್ನುವ ಪರಸ್ಪರ ಸೇತುವೆಗಳನ್ನು ಕಟ್ಟುವ ಕೆಲಸವನ್ನು ಈ ಮಾತುಗಳು ಬಹಳ ಚೆನ್ನಾಗಿ ಮಾಡುತ್ತೆ ಎಂದು ಅಂದು ಕೊಂಡಿದ್ದೇನೆ. ಆ ಕಾದಂಬರಿಯ ನಾಯಕಿ ಯಾದ ವಿಮಲೆ ತನ್ನನ್ನು ಮತ್ತು ದೇಶವನ್ನು ಸ್ವಾತಂತ್ರ್ಯ ಹೋರಾಟದ ಬಂಗಾಳದ ಸಂದರ್ಭದಲ್ಲಿಟ್ಟುಕೊಂಡು ಈ ರೀತಿ ಯೋಚಿಸುತ್ತಾಳೆ. ''ಆ ಭವಿಷ್ಯತ್ತಿನಲ್ಲಿ ನನ್ನ ದೇಶ ನನ್ನಂತೆ ಒಬ್ಬ ಹೆಂಗಸು ಕಾದು ನಿಂತಿದ್ದಂತೆ ತೋರಿತು. ಯಾವುದೋ ಅರಿಯದ ಶಕ್ತಿ ಆಕೆಯನ್ನು ಮನೆಯ ಮೂಲೆಯಿಂದ ಹೊರಗೆ ಕರೆದಿತ್ತು. ನಿಲ್ಲಲ್ಲು, ಆಲೋಚಿಸಲು, ದೀಪ ಹಿಡಿದು ಬರಲು ಸಮಯವಿಲ್ಲದೆ ಕತ್ತಲಲ್ಲಿ ನುಗ್ಗಿದ್ದಳು. ದೂರದ ವೇಣು ನಾದಕ್ಕೆ ಆಕೆಯ ಜೀವ ಹೇಗೆ ಮಿಡಿಯುವುದೆಂದು ನಾನು ಬಲ್ಲೆ. ಆಕೆಯ ಎದೆಯ ಉಬ್ಬಸ, ಕಣ್ಣು ಮುಚ್ಚಿಕೊಂಡು ಓಡಿದರೂ ದೊರೆಯುವುದೆಂಬ ಭರವಸೆ ಎಲ್ಲವೂ ನನಗೆ ತಿಳಿದಿದೆ. ಆಕೆ ಮಾತೆಯಲ್ಲ, ಮಕ್ಕಳ ರೋದನ,ಮನೆಯಲ್ಲಿ ಸಂಜೆ ಬೆಳಗಬೇಕಾದ ದೀಪ, ಮನೆಗೆಲಸ ಯಾವುದರ ಪರಿವೆಯೂ ಆಕೆಗಿಲ್ಲ. ಇದು ವೈಷ್ಣವರ ನಾಡು (ವೈಷ್ಣವರ ನಾಡು ಮತ್ತು ಕೃಷ್ಣಕಥಾನಕ ಎನ್ನುವ ವಿವರಗಳು ಕೃಷ್ಣನನ್ನು ಹುಡುಕಿಕೊಂಡು ಹೋಗುತ್ತಿದ್ದ ಅಭಿಸಾರಿಕೆಯರನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳುತ್ತಿರುವುದು). ಆಕೆ ತನ್ನ ಪ್ರಿಯನನ್ನು ಎದುರುಗೊಳ್ಳಲು ಓಡಿದ್ದಾಳೆ. ಮನೆ ಮನೆಗೆಲಸಗಳನ್ನು ಬಿಟ್ಟು ಹೊರಟಿದ್ದಾಳೆ. ಆಳವಾದ ಆಸೆ ಆಕೆಯನ್ನು ಎಳೆದೊಯ್ಯುತ್ತಿದೆ. ಯಾವ ದಾರಿಯಲ್ಲಿ? ಎಲ್ಲಿಗೆ? ಆಕೆಗೆ ಆ ಚಿಂತೆಯಿಲ್ಲ'' ಇಷ್ಟು ಮಾತುಗಳನ್ನು ಹೇಳಿ, ಈ ಲೇಖನವನ್ನು ಬರೆದಿರುವ (ಠಾಕೂರರ ಸಂವೇದನೆಗಳ ಅತಿಶಿಷ್ಟತೆ. ಒಂದು ಮರುಚಿಂತನೆ ಪ್ರೀತಿಶುಭ ಚಂದ್ರ ಪುಸ್ತಕ : ವಿಮುಕ್ತಿಯ ಹಾದಿಯಲ್ಲಿ) ಪ್ರೀತಿ ಶುಭ ಚಂದ್ರರವರು ಒಂದು ತಮ್ಮ ವಿಮರ್ಶೆಯ ಮಾತನ್ನು ಹೇಳಿದ್ದಾರೆ. ಅದನ್ನು ಇಲ್ಲಿ ಉಲ್ಲೇಖಿಸಲು ಇಷ್ಟಪಡುತ್ತೇನೆ. ಏಕೆಂದರೆ ಸಾವಿತ್ರಮ್ಮನವರ ಬರವಣಿಗೆ ಮತ್ತು ಈಗ ತಾನೆ ಬಿಡುಗಡೆಯಾಗಿರುವ ಈ ಗ್ರಂಥಗಳ ಸಂಬಂಧವನ್ನು ಅದು ಹೇಳುತ್ತದೆ ಎಂದು ನಾನು ಅಂದುಕೊಂಡಿದ್ದೇನೆ.

*8. 3. 1998ರ ಮಹಿಳಾ ದಿನಾಚರಣೆಯಂದು ಶ್ರೀಮತಿ ಎಚ್. ಎ. ಸಾವಿತ್ರಮ್ಮನವರ ಬದುಕು ಬರಹ ಕುರಿತಾದ ಪುಸ್ತಕ 'ವಿಮುಕ್ತಿಯ ಹಾದಿ' ಬಿಡುಗಡೆಯ ಸಂದರ್ಭದಲ್ಲಿ ಡಾ. ಎಚ್. ಎಸ್. ರಾಘವೇಂದ್ರರಾವ್‌ರವರ ಭಾಷಣದಿಂದ ಆಯ್ದ ಭಾಗ*

''ತನಗೆಂದೂ ದಕ್ಕದ ಮನೆಯನ್ನು ಕಳೆದುಕೊಳ್ಳುತ್ತಲೇ ಹೊರಜಗತ್ತಿನಲ್ಲಿಯೂ ಅಪ್ರಸ್ತುತಳಾಗುವ ಸ್ತ್ರೀ ಜೀವನಕ್ಕೆ ಕೃಷ್ಣಕಥಾನಕ ಪ್ರಣಯದ ಪೂರ್ಣಪ್ರತಿಮೆಯನ್ನು ಠಾಕೂರರಲ್ಲದೆ ಮತ್ತಾರು ಇಷ್ಟು ಔಚಿತ್ಯಪೂರ್ಣವಾಗಿ ಬಳಸಿಕೊಳ್ಳಲು ಸಾಧ್ಯ?''

ಆ ಕಾದಂಬರಿಯಲ್ಲಿ ಒಂದು ಕಡೆ ಮನೆಯಿಂದ ಜಗತ್ತಿಗೆ ಕರೆದುಕೊಂಡು ಹೋಗುವ ಆಕಾಂಕ್ಷೆಗಳನ್ನು ತುಂಬುತ್ತಿರುವ, ತನ್ನ ಪತಿಯಾದ ನಿಖಿಲನ ವ್ಯಕ್ತಿತ್ವ, ಮತ್ತೊಂದು ಕಡೆ ತನ್ನ ಮನಸ್ಸಲ್ಲಿ ಸ್ವತಃ ತನ್ನ ಬಗ್ಗೆಯೇ ಪ್ರೀತಿಯ ಬೀಜಗಳನ್ನು ಬಿತ್ತುತ್ತಿರುವ ಸಂದೀಪ. ಈ ಇಬ್ಬರ ಬಗ್ಗೆ ಕೂಡ ಆ ಕಾದಂಬರಿಯ ನಾಯಕಿಯಾದ ವಿಮಲೆ ಯೋಚನೆ ಮಾಡುತ್ತಿದ್ದಾಳೆ. ಅವಳ ಮನಸ್ಸಿನಲ್ಲಾಗುವ ಈ ತಳಮಳಗಳು ತಲ್ಲಣಗಳು ಎಲ್ಲೋ ಒಂದು ಕಡೆ ಸಾವಿತ್ರಮ್ಮನವರ ಸಮಸ್ತ ಬರವಣಿಗೆಗೆ ಕೂಡ ಕನ್ನಡಿ ಹಿಡಿಯುತ್ತದೆ ಎಂದು ನನಗೆ ಅನಿಸಿದ್ದರಿಂದ, ಈ ಕಾದಂಬರಿಗಳನ್ನು ಯಾವ ರೀತಿಯದ್ದಿರಬಹುದು? ಮತ್ತೆ ಸ್ವತಃ ಸಾವಿತ್ರಮ್ಮನವರು ಬರೆದ ಕಾದಂಬರಿಗಳಿಗೂ, ಅವರ ಅನುವಾದಗಳಿಗೂ ಇರುವ ಜೀವಂತದ ಸಂಬಂಧ ಯಾವ ಸ್ವರೂಪದ್ದಿರಬಹುದು? ಎನ್ನುವ ಪ್ರಶ್ನೆಗಳನ್ನು ನಾನು ಕೇಳಿಕೊಂಡು, ಈ ಕೆಲವು ವಿಚಾರಗಳನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ. ''ಆಕೆ ಸಿರಿವಂತ ಕುಟುಂಬದ ಸಂತೃಪ್ತ ಗೃಹಿಣಿ''ಎನ್ನುವ ಮಾತು ಸಾವಿತ್ರಮ್ಮನವರ ಬಗ್ಗೆ ಇದೆ. ಆದರೆ ಈ ಒಂದು 'ಹೊರಗು' ಹೇಳುವ ಸತ್ಯಕ್ಕೂ, ಸಾವಿತ್ರಮ್ಮನವರ ಕಥೆಗಳ ಒಳಗು ಹೇಳುವ ಸತ್ಯಕ್ಕೂ ಇರುವ ಪರಸ್ಪರ ವಿರೋಧ ನನಗೆ ಬಹಳ ಮುಖ್ಯವಾದದ್ದು ಎನಿಸುತ್ತದೆ. ನರಸಿಂಹ ಸ್ವಾಮಿಯವರ ಕವನದ ಒಂದು ಸಾಲು ಹೀಗೆನ್ನುತ್ತದೆ ''ಕಣ್ಣೆಲ್ಲೋ ಎತ್ತರದಲ್ಲಿ ತುಟಿ ದುಃಖದ ಬಿರುಕು'' - ಅಂತ. ಮಾತನಾಡುವ ತುಟಿ ದುಃಖವನ್ನು ವ್ಯಕ್ತಪಡಿಸುವ 'ಬಿರುಕು' ಆದಾಗ ಬರುವ ಬರವಣಿಗೆ ಯಾವ ರೀತಿಯದ್ದಿರಬಹುದು ಅನ್ನುವುದು ಅವರ ಹಲವು ಕಥೆಗಳ ಕೇಂದ್ರವಸ್ತು ಎಂದು ನಾನು ಅಂದುಕೊಂಡಿದ್ದೇನೆ. ಒಂದು ಕಡೆ ಈ ಸಂತೃಪ್ತ ಬದುಕಿನ 'ಹೊರಗ'ನ್ನು ತೋರಿಸುತ್ತಲೇ, ಅವರ ಎಲ್ಲ ಲೇಖನಗಳನ್ನು, ಕಥೆಗಳನ್ನು, ಕಾದಂಬರಿಗಳನ್ನು ಓದುತ್ತಾ, ಪರಿಚಯ ಮಾಡಿಕೊಳ್ಳುತ್ತಾ ಹೋದಾಗ ಕೊನೆಗೆ ಸುಮಾರು 70 ವರ್ಷ ವಯಸ್ಸಿನಲ್ಲಿ ಆಕೆ ಬರೆದ ''ಅಂತರರಾಷ್ಟ್ರೀಯ ಮಹಿಳಾ ವರ್ಷ'' ಎನ್ನುವ ಲೇಖನದಲ್ಲಿ ಹೀಗೆನ್ನುತ್ತಾರೆ - ''ಈ ಕೊರತೆಯನ್ನು

ನಿವಾರಿಸುವುದಕ್ಕೆ ವಿವಾಹ ಪದ್ಧತಿಯನ್ನು ರದ್ದು ಪಡಿಸುವುದೇ ಉಪಾಯ. ಅವಿವಾಹಿತ ಮಾತೆಯರಿಗೆ, ಅವರ ಸಂತಾನಗಳಿಗೆ, ಅಂಟಿಸಲ್ಪಡುವ ಸಾಮಾಜಿಕ ಕಳಂಕಗಳನ್ನು ತೊಡೆದು ಹಾಕಿದ್ದೇ ಆದರೆ ಎಷ್ಟೋ ಸಮಸ್ಯೆಗಳು ಇಲ್ಲವಾಗುತ್ತವೆ. ಮಾನವ ಸ್ವಭಾವ ಬದಲಾಗುವುದಿಲ್ಲ. ಆದ್ದರಿಂದ ಚತುರಳಾದ ಯಾವ ಒಬ್ಬ ಹುಡುಗಿಗೂ ಮಗುವಿನ ದಾತನೊಬ್ಬ ದೊರೆಯದೇ ಇರಲಾರ. ಆ ಮಗು ಪೂರ್ಣವಾಗಿ ಆಕೆಯದೇ ಆಗಿರುವುದರಿಂದ ಬದುಕಿನ ಏಕಾಕಿತನಕ್ಕೆ ಆಕೆ ಹೆದರುವ ಅಗತ್ಯ ಇರುವುದಿಲ್ಲ. ಬದಲಾಗಿ, ಒಂದು ಮನೆಗಾಗಿ, ಗುರಿಯಿಲ್ಲದ ಬದುಕಿನ, ಮನಸ್ಸಿನ ಏಕಾಕಿತನದಿಂದ ಬಿಡುಗಡೆ ಪಡೆಯುವುದಕ್ಕಾಗಿ 'ಮದುವೆ ಬೇಕು' ಎಂದು ಬೇಡುವ ಗತಿ ಆಗ ಪುರುಷರ ಪಾಲಿಗೆ ಬರುತ್ತದೆ''.

ಈ ಎರಡೂ ಮಾತುಗಳನ್ನು ನಾವು ಅಕ್ಕಪಕ್ಕವಿಟ್ಟು ನೋಡಿದಾಗ ಸಾವಿತ್ರಮ್ಮನವರ ವಾಸ್ತವ ಜೀವನಲೋಕ ಮತ್ತು ಅವರ ಮನೋಲೋಕ ಇವೆರೆಡರ ನಡುವಿನ ಪರಸ್ಪರ ವಿರೋಧ, ಮತ್ತು ಅವರ ಮನಸ್ಸಿನಲ್ಲಿ ನಡೆಯುತ್ತಿರಬಹುದಾದ, ಅದೂ ಕೂಡ ಎಂಭತ್ತರ, ತೊಂಭತ್ತರ ದಶಕದಲ್ಲಿರುವ ಈ ಕಾಲದಲ್ಲಿ ಅಲ್ಲ, ನಲವತ್ತರ ಐವತ್ತರ ದಶಕದಲ್ಲಿ ನಡೆದಿದ್ದರ ತಲ್ಲಣಗಳ ಸ್ವರೂಪ ನಮಗೆ ಸ್ಪಷ್ಟವಾಗಿ ಗೊತ್ತಾಗುತ್ತದೆ. ಹೊರಗೆ ಕಾಣುವ ಸತ್ಯ ಬೇರೆ ಒಳಗೆ ಇರುವ ಸತ್ಯ ಬೇರೆ. ಈ ಒಳಗಿನ ಸತ್ಯವನ್ನು ಆವೇಶವಿಲ್ಲದೇ ಭಾವುಕತೆ ಇಲ್ಲದೆ, ತೀರ ನೇರವಾಗಿ ಹೇಳುವಂಥದ್ದನ್ನು ಅವರ ಬರವಣಿಗೆಗಳು ಪರಸ್ಪರ ಪೂರಕವಾಗಿ ಸ್ವಂತ ಕತೆಗಳಲ್ಲಿ ಮತ್ತು ಅವರ ಅನುವಾದಗಳಲ್ಲಿ ಸಾಧಿಸಿದೆ ಎಂದು ನಾನು ಭಾವಿಸಿದ್ದೇನೆ.

ಕಳೆದ ಹತ್ತು ಹದಿನೈದು ವರ್ಷಗಳಲ್ಲಿ ಕನ್ನಡದ ಓದುಗ ಲೋಕಕ್ಕೆ ತಿರುಮಲಾಂಬಾರವರನ್ನು ಕಲ್ಯಾಣಮ್ಮನವರನ್ನು ಮತ್ತು ಇಂಥ ಹತ್ತು ಹಲವು ಲೇಖಕರ ಮರುಪರಿಚಯ ಮಾಡಲಾಗುತ್ತದೆ. ಇದರ ಅಗತ್ಯ ಅವರ ಸಾಹಿತ್ಯವನ್ನು ನಿರ್ಲಕ್ಷ್ಯ ಮಾಡಲಾಗುತ್ತಿತ್ತು ಎಂಬುದು. ಅಷ್ಟೇ ಮುಖ್ಯವಾದ ಒಂದು ಪ್ರೇರಣೆ ಹೊಸಬಗೆಯ ಬರವಣಿಗೆ ಕಾಣಿಸಿಕೊಂಡಾಗ, ಲೇಖಕಿಯರಲ್ಲಿ ಹೊಸ ಪ್ರಜ್ಞೆ ಮೂಡಿದಾಗ, ಅದರ ಜೊತೆಯಲ್ಲಿಯೇ ಬರುವಂತಹ ಒತ್ತಡ ಅಂದರೆ ನಮ್ಮ ಬರವಣಿಗೆಯ ಪರಂಪರೆಯನ್ನು ಕಂಡುಕೊಳ್ಳಬೇಕು ಅನ್ನುವ ಪ್ರಯತ್ನ. ಪರಂಪರೆಯ ಮರು ನಿರ್ಮಾಣ ಮಾಡುವ ಪ್ರಯತ್ನ ಯಾವಾಗಲೂ ಕೂಡ, ಈಗಾಗಲೇ ಪರಂಪರೆ ಅರಿತ ಯಾವುದನ್ನು ಗಮನಿಸಲಾಗಿದೆ, ಯಾವುದನ್ನು ಒಪ್ಪಲಾಗಿದೆ, ಅದಕ್ಕೆ ವಿರೋಧವನ್ನು ರೂಪಿಸಿಕೊಳ್ಳುವುದು ಕೂಡ ಆಗಿರುತ್ತದೆ. ಕನ್ನಡ ಸಾಹಿತ್ಯದ ಪರಂಪರೆ ಅಂದಾಗ ನಾವು ಕಾರಂತ, ಕುವೆಂಪು, ಬೇಂದ್ರೆ ಎಂದು ಲೇಖಕರ ಪರಂಪರೆಯನ್ನು ಹೇಳುವುದಾದರೆ ಅದಕ್ಕೆ ಸಮಾನಾಂತರವಾಗಿ ಲೇಖಕಿಯರ ಮತ್ತೊಂದು ಪರಂಪರೆಯನ್ನು ಕಟ್ಟಿಕೊಳ್ಳುವ ಅಗತ್ಯ ಕೇವಲ ಆ ಲೇಖಕಿಯರ ಬರವಣಿಗೆಯ ಸ್ವರೂಪ ಮತ್ತು ಯೋಗ್ಯತೆಯಿಂದ ಮಾತ್ರ ನಿರ್ಮಾಣವಾಗುವುದಿಲ್ಲ. ಇವತ್ತಿನ ಬರವಣಿಗೆಯ ಅಗತ್ಯ ಕೂಡ ಆಗುತ್ತೆ ಅದು ಅಂತ ನಾನು ಅಂದುಕೊಂಡಿದ್ದೇನೆ. ನಾವು ಈಗ ಏನನ್ನು ಬರೆಯುತ್ತಿದ್ದೇವೆ, ಈ ಚಿಂತನೆಗಳ ಹಿಂದೆ ಇರುವ ಚರಿತ್ರೆಯ ಸ್ವರೂಪ ಯಾವ ಥರದ್ದು? ಆ ಚರಿತ್ರೆ ನಾವು ಈಗ ಬರೆಯಬೇಕೆಂದು ಕೊಂಡಿರುವುದರ ಜೊತೆಯಲ್ಲಿ ಹೊಂದಿರುವ ವಿರೋಧ ಯಾವ ರೀತಿಯದು? ಹೋಲಿಕೆ ಯಾವ ರೀತಿಯದು? ಅನ್ನುವ ಪ್ರಶ್ನೆ ಮುಖ್ಯ. ಏಕೆಂದರೆ ನಾವು ಹಿಂದಿನ ಲೇಖಕಿಯನ್ನು ಕುರಿತು ಬರೆಯುತ್ತಾ ಹೋದಾಗ ಮೊದಮೊದಲ ದಿನಗಳಲ್ಲಿ ಆದ ಹಾಗೆ ಕೇವಲ ವೈಭವೀಕರಣದ ಪ್ರಕ್ರಿಯೆ ಆಗುವುದು ಇಲ್ಲಿ ಇರುವುದಿಲ್ಲ. ಆ ಲೇಖಕಿಯರನ್ನು ಹೊಗಳುವುದು ಒಳ್ಳೆಗುಣಗಳನ್ನು ಗುರುತಿಸುವುದು, ಅವರನ್ನು ನಿರಾಕರಿಸಿದ್ದಾರೆ ಅನ್ನುವ ಕಾರಣಕ್ಕಾಗಿಯೇ ಗುರುತಿಸುವುದು ಈ ರೀತಿ ಪ್ರಯತ್ನಗಳನ್ನು ಈ ಲೇಖನಗಳಲ್ಲಿ ಕಾಣುವುದಕ್ಕೆ ಖಂಡಿತಾ ಸಾಧ್ಯವಿಲ್ಲ ಅಂತ ನಾನು ಅಂದುಕೊಂಡಿದ್ದೇನೆ. ಈ ಲೇಖನಗಳಲ್ಲೂ ಮತ್ತು ಇದೇ ರೀತಿ ಬೇರೆ ಬೇರೆ ಲೇಖಕಿಯರ ಬಗ್ಗೆ ಬಂದಿರುವ ಹಲವು ಪ್ರಯತ್ನಗಳಲ್ಲಿ ಸಹ ಇದೇ ರೀತಿ ಇದೆ. ಏಕೆಂದರೆ ನಮ್ಮ ಇಂದಿನ ಯಾವ ವಾಸ್ತವ, ಸಾವಿತ್ರಮ್ಮನವರ ವಾಸ್ತವಕ್ಕಿಂತ, ಕಲ್ಯಾಣಮ್ಮನವರ ವಾಸ್ತವಕ್ಕಿಂತ ಬೇರೆಯಾಗುತ್ತದೆ. ಆ ಬೇರೆ-ಯಾಗುವುದರ ಕಾರಣಕ್ಕಾಗಿಯೇ ನಮ್ಮ ಬರವಣಿಗೆ ಏಕೆ ಮತ್ತು ಹೇಗೆ ಬದಲಾಗಬೇಕು ಎನ್ನುವ ಪ್ರಶ್ನೆಯನ್ನು ಕೇಳಿಕೊಳ್ಳಬೇಕಾಗುತ್ತದೆ. ಆದರೆ ಆ ಬರವಣಿಗೆಯಲ್ಲಿ ನಮಗೆ ಇವತ್ತು ಪ್ರಸ್ತುತವಾಗಿರುವ ಸಂಗತಿಗಳು ಯಾವುದು ಎಂದು ಸಹ ಕೇಳಿಕೊಳ್ಳಬೇಕಾಗುತ್ತದೆ. ಈ ರೀತಿ ಗುರುತಿಸುತ್ತಾ ಹೋದಾಗ ಪರಂಪರೆಯನ್ನು ಸಮಗ್ರವಾಗಿ ಒಪ್ಪಿಕೊಳ್ಳುವುದಲ್ಲ, ಪರಂಪರೆಯ ಬೇರೆ ಬೇರೆ ಭಾಗಗಳನ್ನು ಬೇರೆ ಬೇರೆ ಲೇಖಕಿಯರನ್ನು ವಿಮರ್ಶಾತ್ಮಕವಾಗಿ ನೋಡಿ, ಅವರಲ್ಲಿ ಕೆಲವನ್ನು ಒಪ್ಪಿಕೊಳ್ಳುವ, ಕೆಲವನ್ನು ನಿರಾಕರಿಸುವ, ಕೆಲವನ್ನು ಬದಲಿಸುವ ಪ್ರಕ್ರಿಯೆ ನಡಿಯುತ್ತಾ ಹೋಗುತ್ತದೆ ಎಂದು ಕಾಣುತ್ತದೆ. ಇಂಥ ಪ್ರಕ್ರಿಯೆ ಈ ದಿನ ಬಿಡುಗಡೆಯಾಗುತ್ತಿರುವ ಈ ಗ್ರಂಥದಲ್ಲಿ ಸಾಕಷ್ಟು ಪ್ರಮಾಣದಲ್ಲಿ ನಡೆದಿದೆ ಎಂದು ನಾನು ಅಂದುಕೊಂಡಿರುವುದರಿಂದ ಕೇವಲ ಸಾವಿತ್ರಮ್ಮನವರ ಬರಹಗಳ ಬಗ್ಗೆ ಬಂದಿರುವ ಒಂದು ಪುಸ್ತಕ ಎನ್ನುವ ಕಾರಣಕ್ಕಾಗಿ ಅಲ್ಲ, ಈ ಮಹಿಳಾ ಸಾಹಿತ್ಯದ ಹಿಂದಿನ ಒತ್ತಡಗಳನ್ನು ಪ್ರೇರಣೆಗಳನ್ನು ಗುರುತಿಸುತ್ತದೆ ಎನ್ನುವ ಕಾರಣಕ್ಕಾಗಿ ಸಹ ಇದು ಬಹಳ ಮುಖ್ಯವಾದ ಪುಸ್ತಕ ಎಂದು ನಾನೆಂದುಕೊಂಡಿದ್ದೇನೆ.

### ಅನಾವರಣಕ್ಕೆ ಅನುಕೂಲವಾದ ಸಾಮಗ್ರಿಗಳು

ಇವತ್ತು ನಮ್ಮ ಮನಸ್ಸಿನಲ್ಲಿ ಆಧುನಿಕ ಪರಿಸರದಲ್ಲಿ ಏನು ನಡೆಯುತ್ತಿದೆ ಅನ್ನುವುದನ್ನು ಹೇಳುವುದಕ್ಕೋಸ್ಕರ ಈ ಹಿಂದಿನವರ ಬರವಣಿಗೆ ನಮಗೆ ಅನುಕೂಲವಾದ ಸಾಮಗ್ರಿಗಳಾಗಿ, ಆಕರ ಸಾಮಗ್ರಿಗಳಾಗಿ ಕೂಡ ನೆರವಾಗುತ್ತದೆ ಎನ್ನುವುದನ್ನು ಈ ಪುಸ್ತಕದ ಮುನ್ನುಡಿಯಲ್ಲಿ ಸಂಪಾದಕರು ಬಹಳ ಸರಿಯಾಗಿ ಗುರುತಿಸಿದ್ದಾರೆ.

ಎರಡನೆಯದು ನಾವು ಲೇಖಕಿಯರನ್ನು ನಿರ್ಲಕ್ಷಿಸಲಾಗಿದೆ ಎಂದು ಹೇಳುವಾಗಲಾಗಲೀ, ಅಥವಾ ಬೇರೆ ಬೇರೆ ವರ್ಣ ವರ್ಗಗಳ ಹಿನ್ನೆಲೆಯಿಂದ ಬಂದ ಬರಹಗಾರರನ್ನು ನಿರ್ಲಕ್ಷಿಸಿದೆ ಎನ್ನುವುದಾಗಲೀ ಅಥವಾ ದಲಿತ ಸಾಹಿತ್ಯವನ್ನು ನಿರ್ಲಕ್ಷಿಸಲಾಗಿದೆ ಅಥವಾ ಜಾನಪದ ಸಾಹಿತ್ಯವನ್ನು ನಿರ್ಲಕ್ಷಿಸಲಾಗಿದೆ ಎಂದೆಲ್ಲ ಹೇಳಿದಾಗ, ಈ ರೀತಿಯ ಎಲ್ಲ ನಿರ್ಲಕ್ಷ್ಯದ ಮಾತುಗಳ ಹಿಂದೆ ವ್ಯಕ್ತಿಗಳ ಮಿತಿಗಳಿಗಿಂತ ಹೆಚ್ಚಾಗಿ ಒಂದು ಸಮುದಾಯದ ಸಾಂಸ್ಕೃತಿಕ ರಾಜಕೀಯ ಕೆಲಸ ಮಾಡುತ್ತದೆ ಎಂದು ಅಂದುಕೊಂಡಿದ್ದೇನೆ.

ಅವರು ಹೀಗೆ ಬರೆದರು, ಇವರು ಹೀಗೆ ಬರೆದರು, ತಿರುಮಲಾಂಬರವರ ಬಗ್ಗೆ ಮಾಸ್ತಿಯವರು ಹೀಗೆ ಬರೆದರು ಇವೆಲ್ಲ ಅಂದರೆ ಈ ಲೇಖನಗಳೆಲ್ಲ ನಿದರ್ಶನಗಳೇ ಹೊರತು ಆ ನಿದರ್ಶನಗಳ ಹಿಂದೆ ಕೆಲಸ ಮಾಡುತ್ತಿರುವ ಸಾಂಸ್ಕೃತಿಕ ಶಕ್ತಿಗಳ, ಅದರ ಹಿಂದೆ ಕೆಲಸ ಮಾಡುವ ರಾಜಕೀಯವಾದ, ಸಾಮಾಜಿಕವಾದ ಒತ್ತಡಗಳ ಪರಿಚಯ ಇಲ್ಲದೇ ಇದ್ದರೆ, ಅದು ಕೇವಲ ವ್ಯಕ್ತಿಗಳ ಬಗ್ಗೆ ವ್ಯಕ್ತಿಗಳು ಆಡಿಕೊಳ್ಳುವ ಮಾತು ಆಗಿಬಿಡುತ್ತದೆ. ಇದು ಇಷ್ಟು ಸರಳವಾದ್ದು ಎಂದು ನಾನು ಖಂಡಿತಾ ಅಂದುಕೊಂಡಿಲ್ಲ.

ಸಾವಿತ್ರಮ್ಮನವರ ಎಲ್ಲ ಕತೆಗಳನ್ನೂ ನಾವಿಟ್ಟುಕೊಂಡು ನೋಡಿದಾಗ, ನವೋದಯ ಕಾಲದ ಮುಖ್ಯ ಲೇಖಕರಾದ ಮಾಸ್ತಿ, ಕಾರಂತ, ಕುವೆಂಪು ಮುಂತಾದವರ ಬರವಣಿಗೆಯೊಂದಿಗೆ ಅವರು ಏರ್ಪಡಿಸಿಕೊಳ್ಳುವಂತಹ ಕರ್ಷಣಗಳು ಯಾವ ರೀತಿಯದು? ಅವರಿಗೆ ಸಮಕಾಲೀನರಾದ ಪ್ರಗತಿಶೀಲ ಲೇಖಕರು, ತ.ರಾ.ಸು., ಅನಾಕೃ ಮುಂತಾದವರು 'ಬಿಡುಗಡೆಯ ಬೇಡಿ' ಇತ್ಯಾದಿಗಳನ್ನು ಬರೆದಿದ್ದನ್ನು ನಾವು ನೋಡಿದ್ದೇವೆ. ಯಾರು ತಾವು 'ಸ್ತ್ರೀ ಸ್ವಾತಂತ್ರ್ಯದ ಪ್ರತಿಪಾದಕರು' ಅಂತ ಹೇಳುತ್ತಿದ್ದರೋ ಅವರೆಲ್ಲರ ಬರವಣಿಗೆಯ ಜೊತೆಗೆ ಸಾವಿತ್ರಮ್ಮನವರ ಬರವಣಿಗೆಯನ್ನು ಪಕ್ಕದಲ್ಲಿಟ್ಟು ನೋಡಿದಾಗ ಅವೆರಡರ ನಡುವಿನ ಸಾಮ್ಯ, ವೈಷಮ್ಯಗಳು ಯಾವ ರೀತಿಯದು ಮತ್ತು ಸಾವಿತ್ರಮ್ಮನವರ ಬರವಣಿಗೆ ಹಿನ್ನೆಲೆಗೆ ಸರಿಯುವುದಕ್ಕೆ ಕಾರಣ ಏನು ಎನ್ನುವ ಪ್ರಶ್ನೆ ಕೇಳಿಕೊಂಡಾಗ ಸಿಕ್ಕುವಂತಹ ಉತ್ತರಗಳು ಬಹಳ ಮಹತ್ವದ್ದು ಅಂತ ನಾನು ತಿಳಿದುಕೊಂಡಿದ್ದೇನೆ. ಒಂದು ಕಡೆ ಸಾವಿತ್ರಮ್ಮನವರು ಒಂದು ಮಾತು ಇಲ್ಲಿದೆ 'ಅದು ಬಣ್ಣ ಹಚ್ಚದ ಬದುಕು' ಅಂತ - ಈ ಮಾತು ಕೇವಲ ಲೇಖಕನ ಭಾಷೆಯಲ್ಲಿರುವಂತಹ ಸಂಗತಿಯಲ್ಲ. ಲೇಖಕ ನೋಡುವ ದೃಷ್ಟಿಕೋನದಲ್ಲಿಯೇ ಈ ಬಣ್ಣ ಹಚ್ಚುವ, ಬಣ್ಣ ಹಚ್ಚದ ಪ್ರಕ್ರಿಯೆ ನಡೆಯುತ್ತದೆ ಎನಿಸುತ್ತದೆ. ಬಣ್ಣ ಎನ್ನುವುದು ಅಲಂಕಾರಯುತವಾದ ಭಾಷೆಯಿಂದ ಹಚ್ಚುವ ಬಣ್ಣವಿರಬಹುದು. ಭಾವನೆಗಳ, ಭಾವುಕತೆಗಳ ವರ್ಣನೆಗಳ ಮಹಾಪೂರದಿಂದ ನಿರ್ಮಿಸುವುದರಿಂದ ಉಂಟಾಗುವ ಬಣ್ಣವೂ ಇರಬಹುದು. ಅಥವಾ ಒಂದು ನಿರ್ದಿಷ್ಟವಾದ ವೈಚಾರಿಕ ದೃಷ್ಟಿಕೋನವನ್ನು ಇಟ್ಟುಕೊಂಡು, ಅದಕ್ಕೆ ಸಂಪೂರ್ಣವಾಗಿ ಅಂಟಿಕೊಂಡು ಬರೆಯುವುದರಿಂದ ಹತ್ತುವಂತಹ ಬಣ್ಣವಿರಬಹುದು. ಆದರೆ ಸಾವಿತ್ರಮ್ಮನವರ ಎಲ್ಲ ಕತೆಗಳನ್ನು ನಾವು ಒಂದು ಕತೆ ಅಂತ ನೋಡಿದಾಗ (ಈ ಮಾತನ್ನು ನಾನು ಒತ್ತಿ ಹೇಳುವುದಕ್ಕೆ ಇಷ್ಟಪಡುತ್ತೇನೆ) ಹೇಗೆ? ಕಾರಂತರ ನಲವತ್ತಾರು ಕಾದಂಬರಿಗಳನ್ನು ಅವರ ಬಿಡಿಬಿಡಿ ಕಾದಂಬರಿಗಳ ಒಂದು ಗುಂಪು ಅಂತ ನೋಡಿದರೆ ಬರುವಂತಹ ತಿಳುವಳಿಕೆ ಬೇರೆ ತರಹದ್ದು. ಮಾಸ್ತಿಯವರ ಸುಮಾರು ನೂರು ಕತೆಗಳನ್ನು ಬಿಡಿಬಿಡಿ ಕತೆಗಳ ಒಂದು ಗುಂಪು ಅಂತ ನೋಡಿದಾಗ ನನಗೆ ಮಾಸ್ತಿಯವರ ಸಮಗ್ರ ಬರವಣಿಗೆಯ ಪರಿಚಯ ಆಗುತ್ತದೆ ಎಂದು ಅನ್ನಿಸುವುದೇ ಇಲ್ಲ. ಬದಲಾಗಿ ಸಾವಿತ್ರಮ್ಮನವರ ಹಲವು ಕತೆಗಳನ್ನು ಪರಸ್ಪರ ಪೂರಕವಾದ, ಒಂದರ ಅರ್ಥ ಇನ್ನೊಂದರಲ್ಲಿ ತುಂಬಿಕೊಳ್ಳುವ, ಬರದ ಅರಕೆ ಮತ್ತೊಂದರಲ್ಲಿ ಬೇರೆ ಎಲ್ಲೋ ಸೇರಿಕೊಳ್ಳುವಂಥ, ಒಟ್ಟು ಕಥೆಗಳ ಒಂದು ಚಿತ್ರ ಎಂದು ನೋಡಿದಾಗ ನಮಗೆ ಗೊತ್ತಾಗುತ್ತದೆ. ಅವರ ಇಡೀ ಬರವಣಿಗೆ ದಾಂಪತ್ಯ ಮತ್ತು ಕುಟುಂಬಗಳ ಅರ್ಥವನ್ನು ಶೋಧಿಸುವಂತಹ ಪ್ರಕ್ರಿಯೆ ಆಗಿದೆ. ನೀವು ಯಾವುದೇ ಒಂದು ಕಥೆಯಲ್ಲಿ ಇವಿಲ್ಲ ಎಂದುಕೊಳ್ಳುವಾಗಲೇ ಅಗೋ ಆ ಕತೆಯಲ್ಲಿ ಈ ದೃಷ್ಟಿಕೋನ ಬಂದಿದೆ. ಹೆಣ್ಣಿನ ಯಾವುದೇ ಒಂದು ಅನುಭವ ಇಲ್ಲಿ ಹೇಳ್ತಾ ಇದ್ದಾರೆ ಈ ಅನುಭವಕ್ಕೆ ಮತ್ತೊಂದು ಮುಖ ಇರಬಹುದಲ್ಲ ಎಂದು ನೀವು ಅಂದುಕೊಳ್ಳುವ ಹೊತ್ತಿನಲ್ಲೇ ಮತ್ಯಾವುದೋ ಸಂಕಲನದ ಮತ್ತೊಂದು ಕತೆ ಆ ಮುಖವನ್ನು ತೋರಿಸಿಕೊಡ್ತಾ ಹೋಗುತ್ತದೆ. ಪುರುಷನ ಮನಸ್ಸಿನಲ್ಲಾಗುವ ತಲ್ಲಣಗಳನ್ನು ಈ ಲೇಖಕಿ ಹೇಳ್ತಾ ಇಲ್ಲವೇನೋ ಅಂದುಕೊಳ್ಳುವುದಕ್ಕೆ ಮುಂಚೇನೇ ಅವರ ಇನ್ಯಾವುದೋ ಕತೆಯಲ್ಲಿ ಪುರುಷನನ್ನು ಅಷ್ಟೇ ಪ್ರಾಮಾಣಿಕವಾಗಿ ಅಷ್ಟೇ ನಿಜವಾಗಿ ಚಿತ್ರಿಸುವಂತಹ ಪ್ರಯತ್ನ ನಡೆಯುವುದನ್ನು ನಾವು ನೋಡುತ್ತಾ ಹೋಗುತ್ತೇವೆ. ಕೇವಲ ಅಲ್ಲಿನ ಎಲ್ಲ ಕತೆಗಳಲ್ಲೂ ಕೂಡ ತಪ್ಪುಗಳನ್ನು ಗುರುತಿಸುವಂತಹ ನೆಲೆ ಇದೆಯೇ ಹೊರತು ಆಕ್ಷೇಪಣೆ ಮಾಡುವಂತಹ, ದ್ವೇಷಿಸುವಂತಹ ನೆಲೆ ಇಲ್ಲ ಅನ್ನುವುದನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದು. ಇದೇ ಒಬ್ಬ ಲೇಖಕಿಗೆ ಅಥವಾ ಲೇಖಕನಿಗೆ ತುಂಬಾ ಅನಿವಾರ್ಯವಾದ ಗುಣ ಎಂದು ನನ್ನ ಭಾವನೆ.

ಅವರ ಎಲ್ಲ ಕತೆಗಳು, ಅನುವಾದಗಳು, ಕಾದಂಬರಿಗಳು ಒಟ್ಟಾಗಿ ಕೊಡುವಂತಹ ಅನುಭವವನ್ನು ನೋಡಿದಾಗ, ಅನಿಸುತ್ತೆ ಇವೆಲ್ಲ ಕತೆಗಳೂ ಕೂಡ ಒಂದು ಸಮಗ್ರ ಚಿತ್ರದ ಬೇರೆ ಬೇರೆ ಬಣ್ಣದ ಗೆರೆಗಳು. ಅದನ್ನು ಒಟ್ಟಾಗಿ ನೋಡಿದಾಗ ಅನಾವರಣವಾಗುವಂತಹ ಜಗತ್ತು ಒಂದು ರೀತಿಯಲ್ಲಿ ಅತೃಪ್ತ ಮಹಿಳೆಯ ಜಗತ್ತು ಅಂತ. ಸಂತೃಪ್ತ ಮಹಿಳೆಯ ಜಗತ್ತಲ್ಲ. ಆದರೆ ಈ ಅತೃಪ್ತಿ ಅನ್ನುವುದು ಅದಕ್ಕೆ ಕೇವಲ ವೈಯುಕ್ತಿಕವಾದ, ಭಾವನಾತ್ಮಕವಾದ ಕಾರಣಗಳನ್ನು ಹುಡುಕುವುದಕ್ಕೆ ಹೋಗುವುದಿಲ್ಲ, ಬದಲಾಗಿ ಅದರ ಹಿಂದೆ ಇರಬಹುದಾದ ಸಾಮಾಜಿಕವಾದ ಕಾರಣಗಳನ್ನು ಹುಡುಕುವಂತಹ

ಪ್ರಯತ್ನವನ್ನು ಅತ್ಯಂತ ನಿರ್ಮಮವಾಗಿ ನಿರ್ಲಿಪ್ತವಾಗಿ ಸಾವಿತ್ರಮ್ಮ-ನವರು ಮಾಡುತ್ತಾರೆ ಎಂದು ಅನಿಸುತ್ತದೆ. ಇದಕ್ಕೆ ಕಾರಣವನ್ನು ಅವರೇ ಹೇಳುತ್ತಾರೆ - ''ನನ್ನ ಕಾಲದ ಮುಖ್ಯವಾದ ಲೇಖಕರ ಬರವಣಿಗೆ ನನಗೆ ಅಪರಿಚಿತವಾಗಿತ್ತು. ಕಾರಂತ, ಮಾಸ್ತಿ, ಬೇಂದ್ರೆಯವರನ್ನು ನಾನು ಓದಿದ್ದು ಬೆಂಗಳೂರಿಗೆ ಬಂದು ನೆಲೆಸಿದ ಮೇಲೆ''

ರಾಜಲಕ್ಷ್ಮಿ ಎನ್.ರಾವ್‌ರವರು ಓದಿದ ಕ್ಲಾಸಿಕ್ಸ್ ಬೇರೆ. ಸಾವಿತ್ರಮ್ಮನವರು ಓದಿದ ಕ್ಲಾಸಿಕ್ಸ್ ಬೇರೆ ಎಂದು ನನ್ನ ಭಾವನೆ. ಏಕೆಂದರೆ ಸಾಹಿತ್ಯದ ಅಭ್ಯಾಸ ಬೇರೆ ಬೇರೆ ದಶಕಗಳಲ್ಲಿ ಬದಲಾವಣೆಯನ್ನು ಪಡೆಯುತ್ತಾ ಹೋಗುತ್ತದೆ. 20ರ 30ರ ದಶಕದಲ್ಲಿ ಓದಿಕೊಳ್ಳುತ್ತಿದ್ದ ಕ್ಲಾಸಿಕ್ಸ್ ಬೇರೆ. 80ರ ದಶಕದಲ್ಲಿ ನಾವು ಕ್ಲಾಸಿಕ್ಸ್ ಎಂದು ಕರೆಯುವುದೇ ಬೇರೆ. ಈ ದೃಷ್ಟಿಯಲ್ಲಿ ನೋಡಿದಾಗ ಸಾವಿತ್ರಮ್ಮನವರು ಓದಿರಬಹುದಾದಂತಹ ಇಂಗ್ಲೀಷ್ ಸಾಹಿತ್ಯ, ಇಂಗ್ಲೀಷ್ ಭಾಷೆ ಮತ್ತು ಅದರ ಸಾಹಿತ್ಯವೇನೇ ಅಂಡರ್ ಸ್ಟೇಟ್‌ಮೆಂಟ್‌ಗಳಿಗೆ ಬಹಳ ಪ್ರಸಿದ್ಧವಾದದ್ದು. ಹೇಳಬೇಕಾದದ್ದನ್ನು ಅಪಾರವಾದ ಭಾವನೆಗಳ ಬಣ್ಣ ಹಚ್ಚಿ ಅತ್ಯಂತ ಸೆಂಟಿಮೆಂಟಲ್ಲಾಗಿ ಅಲ್ಲ, ನಾಲಕ್ಕು ಮಾತು ಹೇಳುವ ಕಡೆ ಒಂದು ಮಾತಲ್ಲಿ ಅದನ್ನು ಹೇಳಬೇಕು ಅನ್ನುವ ಪ್ರಯತ್ನ ಇಂಗ್ಲೀಷ್ ಸಾಹಿತ್ಯದ ಹಲವು ಕೃತಿಗಳ ಹಿಂದೆ ಇರುವ ಲಕ್ಷಣ ಎಂದು ತೋರುತ್ತದೆ. ಸಾವಿತ್ರಮ್ಮನವರ ಮನಸ್ಸನ್ನು ಮತ್ತು ಅವರ ಬರವಣಿಗೆಯನ್ನು ತಿದ್ದಿ ತೀಡಿರುವಂಥದ್ದು ಈ ರೀತಿಯ ಸಂಗತಿ ಎಂದು ನಾನು ಅಂದುಕೊಂಡಿದ್ದೇನೆ.

ಸಾವಿತ್ರಮ್ಮನವರ ಬರವಣಿಗೆಯಲ್ಲಿ ಇಂಗ್ಲೀಷ್ ಅಷ್ಟೇ ಅಲ್ಲದೆ ಅವರ ಮಾತೃಭಾಷೆಯಾದ ತೆಲುಗು ನುಡಿಗಟ್ಟುಗಳು ಅವರ ಗದ್ಯದಲ್ಲಿ ಹಾಗೆ ಹಾಗೇ ಬರುವುದು ನೋಡಿ ನನಗೆ ತುಂಬಾ ಕೌತುಕ ಮತ್ತು ಸಂತೋಷವಾಯಿತು. 'ಬಂಗಾರದಂಥ ಅಮ್ಮ' ಅಂದು ಬರೆಯುತ್ತಾರೆ. 'ಬಂಗಾರದಂಥ ಅಮ್ಮ' ಎನ್ನುವುದು ನೂರಕ್ಕೆ ನೂರರಷ್ಟು ಟಿಪಿಕಲ್ ಆದ ತೆಲುಗು ಈಡಿಯಂನಿಂದ ಬರುವಂತಹುದು. ಇಂಗ್ಲೀಷ್ ಭಾಷೆಯನ್ನು ಕೂಡ ಹಾಗೇ ಅವರು ರಕ್ತಗತವಾಗಿ ಮಾಡಿಕೊಂಡಿರುವುದರಿಂದ, ಅವರ 'ಸರಿದ ಬೆರಳು' ಕಥೆ ಹೆಸರು ಹಾಗೂ ಪುಸ್ತಕದ ಹೆಸರು ಸಹ ಹಾಗೆ. ಇಂಗ್ಲೀಷ್‌ನಲ್ಲಿ ಒಂದು ಮಾತಿದೆ ''ದಿ ಮೂವಿಂಗ್ ಫಿಂಗರ್ ರೈಟ್ಸ್ ಅಂಡ್ ಹ್ಯಾವಿಂಗ್ ರಿಸ್ಟ್ ಮೂವ್ಸ್ ಆನ್'' ಬರೆಯುವ ಬೆರಳು ಬರೆಯುತ್ತಾ ಹೋಗುತ್ತದೆ. ಬರೆದ ಮೇಲೆ ತನ್ನ ಪಾಡಿಗೆ ತಾನು ಮುಂದಕ್ಕೆ ಹೋಗ್ತಾ ಇರುತ್ತೆ. ಆ ಕಥೆಯಲ್ಲಿ ಬರುವಂತಹ ರೂಬಿ, ಶ್ಯಾಮ ಇತ್ಯಾದಿ ಪಾತ್ರಗಳ ಪರಸ್ಪರ ಸಂಬಂಧ ಈ ಸರಿದ ಬೆರಳು ಎಂದಿದೆಯಲ್ಲ 'ದಿ ಮೂವಿಂಗ್ ಫಿಂಗರ್ ರೈಟ್ಸ್ ಅಂಡ್ ಹ್ಯಾವಿಂಗ್ ರಿಸ್ಟ್ ಮೂವ್ಸ್ ಆನ್' ಅನ್ನುವ ಮಾತನ್ನು ಹೇಳುತ್ತದೆ. ಹೀಗೆ ಇಂಗ್ಲೀಷ್ ಮತ್ತು ತೆಲುಗು ಭಾಷೆಗಳ ನುಡಿಗಟ್ಟನ್ನು ಕನ್ನಡದಲ್ಲಿ ಒಳಗೊಳ್ಳುವಂತಹ ಪ್ರಯತ್ನವನ್ನು ಬಹಳ ಅಪರೂಪವಾಗಿ ಮಾಡಿರುವಂತಹವರ ಲೇಖಕರಲ್ಲಿ ಸಾವಿತ್ರಮ್ಮನವರೂ ಒಬ್ಬರು ಅಂತ ನನಗೆ ಅನ್ನಿಸುತ್ತದೆ.

ಕೊನೆಯದಾಗಿ ಅವರ ಬದುಕಿನ ಮತ್ತು ಬರವಣಿಗೆಯ ಕೊನೆಕೊನೆಯ ಹಂತದಲ್ಲಿ ಪ್ರಕಟ ಮಾಡಿದ ರಾಮಾಯಣದ ಕಥೆಯನ್ನು ಮತ್ತೆ ಮರುಕಟ್ಟುವ ಪ್ರಯತ್ನಗಳಿದೆಯಲ್ಲ, ರಾಮ ಸೀತೆ ರಾವಣ ಮತ್ತು ವಿಮುಕ್ತಿಯ ಬಗ್ಗೆ ಕೆಲವು ಮಾತುಗಳನ್ನಾಗಿ ನನ್ನ ಈ ಮಾತುಗಳನ್ನು ಮುಗಿಸುತ್ತೇನೆ. ಈ ಎರಡೂ ಕಾದಂಬರಿಗಳಲ್ಲಿ ಹಲವಾರು ಈಚಿನ ಕೃತಿಗಳಲ್ಲಿ ಆಗುವ ಹಾಗೆ ಪುರಾಣಗಳನ್ನು ಮತ್ತೆ ಕಟ್ಟುವ ಪ್ರಯತ್ನ ಇದೆ. ಈ ಮತ್ತು ಕಟ್ಟುವ ಪ್ರಯತ್ನದ ಹಿಂದೆ ಇರುವಂಥದ್ದು ಕ್ರೌರ್ಯ ಅನ್ನುವುದು (ಹೆಣ್ಣಿನ ಬಗ್ಗೆ ಗಂಡು ತೋರಿಸುವ ಕ್ರೌರ್ಯ ಎನ್ನುವುದು) ಕೇವಲ ಹಿಂಸೆಗೆ ಸೀಮಿತ ವಾದದ್ದಲ್ಲ. ಅತ್ಯಂತ ನಾಗರೀಕವಾಗಿ ನಡೆದುಕೊಳ್ಳುತ್ತಲೇ, ಒಂದೇ ಒಂದು ಕ್ರೂರವಾದ ಮಾತನ್ನೂ ಆಡದೆ ತಾನು ತೆಗೆದುಕೊಳ್ಳುವ ತೀರ್ಮಾನದಿಂದಲೇ ಕೌಸಲ್ಯೆಯ ಬದುಕನ್ನು ಸೀತೆಯ ಬದುಕನ್ನು ಹಾಳುಗೆಡಹುವ ಪ್ರಯತ್ನ ಆಗಬಹುದು ಎನ್ನುವುದನ್ನು ಬಹಳ ಸಮರ್ಥವಾಗಿ ಸಾವಿತ್ರಮ್ಮನವರು ಈ ಕಾದಂಬರಿಯಲ್ಲಿ ಹೇಳಿದ್ದಾರೆ ಎಂದು ನನಗನ್ನಿಸುತ್ತದೆ. ಆದರ ಅಲ್ಲಿ ಕುತೂಹಲಕಾರಿಯಾದ ಮತ್ತೊಂದು ಪ್ರಶ್ನೆ ಏನೆಂದರೆ ವಿಮುಕ್ತಿ ಮತ್ತು ರಾಮ ಸೀತೆ ರಾವಣ ಕಾದಂಬರಿಯಲ್ಲಿ ಅವರು ದ್ರಾವಿಡ ಸಂಸ್ಕೃತಿಯನ್ನು ಒಂದು ಕಡೆ ಇಟ್ಟು ಆರ್ಯ ಸಂಸ್ಕೃತಿಯನ್ನು ಇನ್ನೊಂದು ಕಡೆ ಇಟ್ಟು ಆರ್ಯ ಸಂಸ್ಕೃತಿಯಲ್ಲಿ ಹೆಣ್ಣನ್ನು ನೋಡುವ ದೃಷ್ಟಿಕೋನ, ದ್ರಾವಿಡ ಸಂಸ್ಕೃತಿಯಲ್ಲಿ ಹೆಣ್ಣನ್ನು ನೋಡುವ ದೃಷ್ಟಿಕೋನ, ಇವುಗಳ ನಡುವೆ ಪರಸ್ಪರ ಎಷ್ಟು ವ್ಯತ್ಯಾಸವಿದೆ. ವಾನರ ಸಂಸ್ಕೃತಿಯ ನೆಲೆಯಿಂದ ಸೀತೆಯನ್ನು ನೋಡಿದಾಗ ರಾಮ ನಡೆಸಿಕೊಂಡ ರೀತಿಯನ್ನು ನೋಡಿದಾಗ ರಾಮನಲ್ಲಿ ಎಷ್ಟೊಂದು ತಪ್ಪುಗಳು ಕಾಣುತ್ತವೆ ಎನ್ನುವುದನ್ನು ಅವರು ಬಹಳ ಸ್ಪಷ್ಟವಾಗಿ ಹೇಳುತ್ತಾರೆ. ಇವತ್ತಿಗೂ ಒಬ್ಬ ಹಿರಿಯ ಲೇಖಕಿ ಆ ರೀತಿಯ ದೃಷ್ಟಿಕೋನವನ್ನು ತೆಗೆದುಕೊಳ್ಳುವುದು ಬಹಳ ಅದ್ಭುತವಾದ ಆಶ್ಚರ್ಯ ಅಂತ ನನಗನಿಸುತ್ತದೆ. ಏಕೆಂದರೆ ಇಂದಿನ ಚರ್ಚೆಗಳಲ್ಲಿ ಆ ಮಾತು ಬರುತ್ತಿರುತ್ತದೆ. ಜಾನಪದ ಸಂಸ್ಕೃತಿ ಅಂತ ಒಂದಿದೆ. ಅದರಲ್ಲಿ ಹೆಣ್ಣನ್ನು ನೋಡುವ ದೃಷ್ಟಿಕೋನ ಬೇರೆಯಾಗಿದೆ ಅಂತ ಇದನ್ನು ಸಾವಿತ್ರಮ್ಮನವರು, ತಮ್ಮ ಬದುಕು ತುಂಬ ಸೀಮಿತವಾದ ವಲಯದಲ್ಲಿ ಬದುಕಿದ್ದಾರೆ ಎಂದು ಹೇಳಲಾದ ಸಾವಿತ್ರಮ್ಮನವರು, ತಮ್ಮ ಕಾದಂಬರಿಯಲ್ಲಿ ಅದನ್ನು ಗ್ರಹಿಸಿದ್ದಾರೆ ಎಂದರೆ ಅತ್ಯಂತ ಪ್ರತಿಭಾಶೀಲಳಾದ ಲೇಖಕಿ ಮಾತ್ರ ಮಾಡಬಹುದಾದ ಕೆಲಸ ಅಂತ ನಾನು ಅಂದುಕೊಂಡಿದ್ದೇನೆ.

ಹೀಗೆ ತಮ್ಮ ಹಲವಾರು ಬರವಣಿಗೆಗಳಲ್ಲಿ ತಮ್ಮ ದೃಷ್ಟಿಕೋನವನ್ನು ಅತ್ಯಂತ ವಸ್ತುನಿಷ್ಠವಾಗಿ ಸೃಷ್ಟಿಸಿದ ಸಾವಿತ್ರಮ್ಮನವರನ್ನು ಕುರಿತಾಗಿ ಇಂತಹ ಪುಸ್ತಕ ಬರುತ್ತಿರುವುದು ಈ ರೀತಿಯ ಮುಂದಿನ ಪ್ರಯತ್ನಗಳಿಗೆ ನಾಂದಿಯಾಗಬೇಕು ಮತ್ತು ಮೊದಲು ಆಗಬೇಕು ಅಂತ ಹೇಳುತ್ತಾ ನನ್ನ ಮಾತನ್ನು ಮುಗಿಸುತ್ತಿದ್ದೇನೆ. ಈ ಅವಕಾಶ ಕೊಟ್ಟಿದ್ದಕ್ಕಾಗಿ ವಂದನೆಗಳು, ನಮಸ್ಕಾರ. ●

# ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆ




ಹೆಣ್ಣು ತನ್ನ ದುಡಿಯುವ ಹಕ್ಕು ಮತ್ತು ಬಾಧ್ಯತೆಗಳಿಗಾಗಿ ನಡೆಸುವ ಹೋರಾಟವನ್ನು ನೆನಪಿಸುವ, ಗೌರವಿಸುವ ದಿನವಾದ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯನ್ನು ಈ ಬಾರಿ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರವು ಕನ್ನಡದ ಹಿರಿಯ ಹಾಗೂ ಅಪರೂಪದ ಲೇಖಕಿಯಾದ ಹೆಚ್.ವಿ. ಸಾವಿತ್ರಮ್ಮನವರ ಬದುಕು - ಬರಹಗಳನ್ನು ಕುರಿತ ಸ್ಮರಣೆಯ ಪುಸ್ತಕ 'ವಿಮುಕ್ತೆಯ ಹಾದಿ'ಯ ಬಿಡುಗಡೆಯೊಂದಿಗೆ ಆಚರಿಸಿತು. ಅನನ್ಯ ಸಂಸ್ಥೆಯ ಸಹಯೋಗದೊಂದಿಗೆ ಅನನ್ಯ ಸಭಾಂಗಣದಲ್ಲಿ ನಡೆದ ಈ ಸಾಹಿತ್ಯಕ ಕಾರ್ಯಕ್ರಮದಲ್ಲಿ ಸಾಹಿತ್ಯಾಸಕ್ತರ ಜೊತೆಗೆ ಸಾವಿತ್ರಮ್ಮನವರ ಕುಟುಂಬದ ಮಂದಿಯೂ ಭಾಗವಹಿಸಿದ್ದು ಕಾರ್ಯಕ್ರಮದಲ್ಲಿ ವಿಚಾರ ಮಂಥನದೊಂದಿಗೆ ಭಾವನಾತ್ಮಕ ವಾತಾವರಣವೂ ಸಮ್ಮಿಳಿತವಾಗಿತ್ತು.

ಬದುಕಿನಲ್ಲೆಂದೂ ಯಾವುದೇ ಚಳುವಳಿಗೆಂದು ಸಾವಿತ್ರಮ್ಮ ಬೀದಿಗಿಳಿದವರಲ್ಲ, ಮಹಿಳೆಯರ ಹಕ್ಕುಗಳಿಗಾಗಿ ಹೋರಾಟ ನಡೆಸಿದವರೂ ಅಲ್ಲ. ಆದರೂ ಸಾವಿತ್ರಮ್ಮನವರು ತಮ್ಮ ಕತೆ, ಕಾದಂಬರಿಗಳಲ್ಲಿ ಸಾಮಾನ್ಯಾತಿಸಾಮಾನ್ಯ ಮಹಿಳೆಯರಲ್ಲಿ ಇರಬಹುದಾದ ದಿಟ್ಟತನ, ಸ್ವಂತಿಕೆಯ ಅರಿವಿನ ನೆಲೆಗಳನ್ನು ಗುರುತಿಸಿ ಸ್ವಾಭಿಮಾನದ, ಪರಿಪೂರ್ಣತೆಗೆ ತುಡಿಯುವ ಸ್ತ್ರೀ ಮಾದರಿಗಳನ್ನು ಚಿತ್ರಿಸುವುದರ ಮೂಲಕ ಮಹಿಳಾ ಹೋರಾಟಕ್ಕೆ ಸ್ಫೂರ್ತಿಯ ಸೆಲೆಗಳನ್ನು ನಿರ್ಮಿಸಿದ್ದಾರೆ. ಜಾಗೃತಿ ಮಹಿಳಾ ಅಧ್ಯಯನದ ಕೇಂದ್ರವು ಸಾವಿತ್ರಮ್ಮನವರ ವ್ಯಕ್ತಿತ್ವದ ಈ ಮುಖವನ್ನು ಪರಿಚಯಿಸುವುದರ ಮೂಲಕ ಮಹಿಳಾ ದಿನಾಚರಣೆಯ ಅರ್ಥವಂತಿಕೆಯನ್ನು ಕಾಣುವ ಪ್ರಯತ್ನ ಮಾಡಿತು.

ಸಾವಿತ್ರಮ್ಮನವರೊಂದಿಗೆ ನಿಕಟ ಸಂಪರ್ಕವಿರಿಸಿಕೊಂಡಿದ್ದ ಹಿರಿಯ ಲೇಖಕಿ ಡಾ। ಜ್ಯೋತ್ಸ್ನಾ ಕಾಮತ್ ಈ ಸಭೆಯ ಅಧ್ಯಕ್ಷತೆ ವಹಿಸಿದ್ದು, ಸಾವಿತ್ರಮ್ಮನವರೊಂದಿಗಿನ ತಮ್ಮ ನೆನಪುಗಳನ್ನು ಸಭಿಕರ ಮುಂದೆ ಹಂಚಿಕೊಂಡರು. ಸಾವಿತ್ರಮ್ಮನವರ ಗುರುಗಳಾಗಿದ್ದ ಕನ್ನಡದ ಹಿರಿಯ ವಿದ್ವಾಂಸರಾದ ಪ್ರೊ.ಎ.ಎನ್. ಮೂರ್ತಿರಾಯರು, ಹೆಚ್.ವಿ.ಸಾವಿತ್ರಮ್ಮನವರ ಬದುಕು-ಬರಹಗಳ ಸಂಕಲನವಾದ 'ವಿಮುಕ್ತೆಯ ಹಾದಿ'ಯನ್ನು ಬಿಡುಗಡೆ ಮಾಡಿದರು. ಪ್ರಸಿದ್ಧ ಸ್ತ್ರೀವಾದಿ ವಿಮರ್ಶಕಿಯಾದ ಡಾ। ವಿಜಯಾದಬ್ಬೆ ಸಾವಿತ್ರಮ್ಮನವರ ಬರವಣಿಗೆಯ ಪ್ರಸ್ತುತತೆಯನ್ನು ಕುರಿತು ಸವಿಸ್ತಾರವಾಗಿ ಭಾಷಣ ಮಾಡಿದರು. ಬಿಡುಗಡೆಯಾದ ಕೃತಿ 'ವಿಮುಕ್ತೆಯ ಹಾದಿ'ಯನ್ನು ಕುರಿತು ಪ್ರಸಿದ್ಧ ವಿಮರ್ಶಕ ಡಾ।ಹೆಚ್.ಎಸ್. ರಾಘವೇಂದ್ರರಾವ್ ಅವರು ಭಾಷಣ ಮಾಡಿದರು. ಲೇಖಕಿಯರ ಸಂಘದ ಹಿಂದಿನ ಅಧ್ಯಕ್ಷೆಯಾಗಿದ್ದ ಹೇಮಲತಾ ಮಹಿಷಿಯವರು ಸಾವಿತ್ರಮ್ಮನವರು ಸಂಘದೊಂದಿಗೆ ಹೊಂದಿದ್ದ ಸಂಬಂಧವನ್ನು ಕುರಿತು ಪ್ರಸ್ತಾಪಿಸಿದರು. ಹೀಗೆ ಈ ಮಹಿಳಾ ದಿನಾಚರಣೆಯಂದು 'ವಿಮುಕ್ತೆಯ ಹಾದಿ' ಹೆಜ್ಜೆಗಳನ್ನು ಗುರುತಿಸುವ ಯತ್ನ ನಡೆಯಿತು.

# ಹೋಂ ರೂಲ್ ಲೀಗ್

**ಇತ್ತೀಚೆಗೆ ಮಾರ್ಚ್ 19ರಂದು ದೇಶದ ಖ್ಯಾತ ಕಮ್ಯೂನಿಸ್ಟ್ ನಾಯಕ ಕಾಮ್ರೇಡ್ ಇ.ಎಂ.ಎಸ್. ನಿಧನರಾದರು. ಅವರ ಸಾವು ಪ್ರಗತಿಪರ ಚಳುವಳಿಗೆ ಒಂದು ಭಾರಿ ನಷ್ಟ. ಅವರ ಮರಣಕ್ಕೆ ಅಚಲ ಕಂಬನಿ ಸೂಚಿಸುತ್ತಾ ಅವರ ಪುಸ್ತಕ *Freedom Struggle in India* ದಿಂದ ಆಯ್ದ ಭಾಗವನ್ನು ಇಲ್ಲಿ ಕೊಟ್ಟಿದೆ. ಇದರ ಕನ್ನಡ ರೂಪವನ್ನು ಸಿದ್ಧಗೊಳಿಸಿದವರು ಶ್ರೀಮತಿ ಹೆಚ್. ಎಸ್. ಗೀತಾ.**

ಕಾಂಗ್ರೆಸ್ ಪಕ್ಷ ತನ್ನ ಚಟುವಟಿಕೆಗಳಲ್ಲಿ ತೀವ್ರಗಾಮಿಗಳೂ ಪಾಲ್ಗೊಳ್ಳಲಿ ಎಂಬ ಆಶಯದಿಂದ ತನ್ನ ತತ್ತ್ವ ನೀತಿ ನಿಯಮಾವಳಿಗಳಲ್ಲಿ ಮಾರ್ಪಾಟುಗಳನ್ನೇನಾದರೂ ಮಾಡಿಕೊಂಡಲ್ಲಿ, ಇಡೀ ಸಂಸ್ಥೆಯೇ ತೀವ್ರಗಾಮಿಗಳ ಹಿಡಿತಕ್ಕೆ ಸಿಕ್ಕಿಕೊಂಡೀತೆಂಬುದು ಮಿತಗಾಮಿಗಳಿಗಿದ್ದ ಆತಂಕ. ಈ ಭಯ, ಆತಂಕಗಳಿಗೆ ಆಧಾರ ಇಲ್ಲದೇ ಇರಲಿಲ್ಲ ಎಂಬುದನ್ನು ನಂತರದ ಬೆಳವಣಿಗೆಗಳು ನಿರೂಪಿಸಿದವು. ಉದಾಹರಣೆಗೆ, ಕಾಂಗ್ರೆಸ್‌ನಲ್ಲಿ ಬಿರುಕು ಕಾಣಿಸಿಕೊಂಡ ನಂತರ ನಡೆದ ಪ್ರಥಮ ಅಧಿವೇಶನಕ್ಕೆ ತಿಲಕರು ಆಗಮಿಸಿದಾಗ ಹಾದಿಯುದ್ದಕ್ಕೂ ನೆರೆದಿದ್ದ ಅಪಾರ ಜನಸ್ತೋಮ ಅವರಿಗೆ ಭವ್ಯ ಸ್ವಾಗತ ನೀಡಿತು. ಅಲ್ಲದೆ ಮರುವರ್ಷದ ಅಧಿವೇಶನದಲ್ಲಿ ಉಗ್ರಗಾಮಿಗಳ ಬೆಂಬಲಿಗರೆನಿಸಿದ್ದ ಶ್ರೀಮತಿ ಆನಿ ಬೆಸೆಂಟ್‌ರವರನ್ನು ಪಕ್ಷದ ಅಧ್ಯಕ್ಷೆಯನ್ನಾಗಿಯೂ ಆಯ್ಕೆ ಮಾಡಲಾಯಿತು. ಪಕ್ಷದ ಅಧ್ಯಕ್ಷ ಸ್ಥಾನಕ್ಕೆ ತಿಲಕ್ ಹಾಗೂ ಲಾಲಾ ಲಜ್‌ಪತ್‌ರಾಯ್‌ರವರ ಹೆಸರುಗಳ ಪ್ರಸ್ತಾಪ ಬಂದಾಗ ಅದನ್ನು ತಿರಸ್ಕರಿಸಿ, ಪಕ್ಷದ ಅಧ್ಯಕ್ಷಗಿರಿ ಕೇವಲ ತಮ್ಮ ಸೊತ್ತು ಎನ್ನುವಂತೆ ಆವರೆಗೂ ವರ್ತಿಸಿದ್ದ ಮಿತಗಾಮಿಗಳು ಈಗ ತೀವ್ರಗಾಮಿ ನೆಲೆಯಿಂದ ಬಂದಂಥ ವ್ಯಕ್ತಿಯನ್ನೇ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿದ್ದರು. ಯುದ್ಧದ ಸಮಯದಲ್ಲಿ ಆದಂಥ ರಾಜಕೀಯ ಬದಲಾವಣೆಗಳ ಸ್ಪಷ್ಟ ನಿದರ್ಶನವಿದು.

ಈ ಬೆಳವಣಿಗೆ ಮಿತಗಾಮಿಗಳಿಗಲ್ಲದೆ ಬ್ರಿಟಿಷ್ ಪ್ರಭುತ್ವಕ್ಕೂ ಆತಂಕ ಉಂಟುಮಾಡಿತು. ವೈಸಾರಾಯ್‌ನ ಕಾರ್ಯನಿರ್ವಾಹಕ ಮಂಡಲಿಯ ಗೃಹ ಸದಸ್ಯರ ಜನವರಿ 13ರ ರಹಸ್ಯ ರವಾನೆಯಲ್ಲಿ ಒಕ್ಕಣೆ ಹೀಗಿದ್ದಿತು - ''ಇದೊಂದು ಕಠಿಣ ಪರಿಸ್ಥಿತಿ. ತಿಲಕ್ ಮತ್ತು ಬೆಸೆಂಟರ ಹಿಂಬಾಲಕರಾಗಿರುವ ಜನವರ್ಗದಿಂದ ಮಿತಗಾಮಿ ನಾಯಕರುಗಳು ಯಾವುದೇ ಬೆಂಬಲ ಗಳಿಸಲಾರದವರಾಗಿದ್ದಾರೆ'' ಮಿತಗಾಮಿಗಳನ್ನು ಕೊಂಚ ಸಮಾಧಾನ ಪಡಿಸಲು ಭಾರತ ಸರ್ಕಾರವು ಕೆಲ ಆಡಳಿತಾತ್ಮಕ ಸುಧಾರಣೆಗಳನ್ನು ಪ್ರಸ್ತಾಪಿಸುವಂತೆ ಈ ಪರಿಸ್ಥಿತಿಯು ಪ್ರೇರೇಪಿಸಿತು. ಆದರೆ ರಾಜಕೀಯ ವಿದ್ಯಮಾನಗಳನ್ನು ತೂಗಿ ಅಳೆಯುವಾಗ ಮಿತಗಾಮಿಗಳ ಲೆಕ್ಕಾಚಾರ ಕೊಂಚ ಮೇಲುಕೆಳಗಾಯಿತು. ಕಾಂಗ್ರೆಸ್ ತೊರೆದು ಹೋಗಿದ್ದ ತೀವ್ರಗಾಮಿಗಳನ್ನು ಮತ್ತೆ ಕಾಂಗ್ರೆಸ್‌ಗೆ ಸೇರಿಸಿಕೊಳ್ಳದಿದ್ದರೆ ಎಲ್ಲವೂ ಸರಿಹೋಗುತ್ತದೆ ಎಂದು ಅವರು ಎಣಿಸಿದರು. ಆದರೆ ಅವರ ಈ ಎಣಿಕೆಯು ತಪ್ಪಾಗಿತ್ತು. ಈ ತೀವ್ರಗಾಮಿಗಳು ಕಾಂಗ್ರೆಸ್‌ನ ಹೊರಗಿದ್ದುಕೊಂಡು ತಮ್ಮದೇ ಆದ ರಾಜಕೀಯ ಸಿದ್ಧಾಂತಗಳ ಪ್ರಚಾರ ಮಾಡುವ ಸಾಮರ್ಥ್ಯ ಉಳ್ಳವರಾಗಿದ್ದರು. ಅಲ್ಲದೆ, ದೇಶದಲ್ಲಿ ಈಗಾಗಲೇ ಬಂಡವಾಳಶಾಹಿಗಳ ವರ್ಗವೊಂದು ತಲೆ ಎತ್ತಿದ್ದು, ಅದು ಬ್ರಿಟಿಷ್ ಪ್ರಭುತ್ವದ ಮೇಲೆ ಅಧಿಕ ಒತ್ತಡವನ್ನು ಹೇರಿ, ತನ್ನ ಪ್ರಾಬಲ್ಯವನ್ನು ವಿಸ್ತರಿಸಲು ನಿರ್ಧರಿಸಿತ್ತು. ಆದ್ದರಿಂದ ತೀವ್ರಗಾಮಿಗಳು ತಾವು ಕಾಂಗ್ರೆಸ್‌ನಲ್ಲಿ ಇದ್ದೇವೆಯೋ, ಇಲ್ಲವೋ ಎಂಬುದನ್ನು ಗಣನೆಗೇ ತೆಗೆದುಕೊಳ್ಳದೆ, ತಮ್ಮ ರಾಜಕೀಯ ನಿಲುವುಗಳಿಗೆ ಬದ್ಧರಾಗಿ ಕಾರ್ಯಸಾಧನೆಯಲ್ಲಿ ತೊಡಗಿಕೊಂಡರು.

ಇದರ ಪರಿಣಾಮವಾಗಿ ಹೊಸ ರಾಜಕೀಯ ಸಂಸ್ಥೆಯೊಂದು ತೀವ್ರಗಾಮಿಗಳ ಚಟುವಟಿಕೆಗಳ ವ್ಯವಸ್ಥಿತ ರೂಪವಾಗಿ, '**ಹೋಂ ರೂಲ್ ಲೀಗ್**' ಎಂಬ ಹೆಸರಿನಲ್ಲಿ ಉದಯಿಸಿತು. ನಿಖರವಾಗಿ ಹೇಳುವುದಾದರೆ, 1915ರಲ್ಲಿ ಇದೇ ಹೆಸರಿನಲ್ಲಿ ಎರಡು ಸಂಸ್ಥೆಗಳು ಹುಟ್ಟಿಕೊಂಡವು. ಒಂದನ್ನು ಮಹಾರಾಷ್ಟ್ರದಲ್ಲಿ ತಿಲಕ್‌ರವರು ಸ್ಥಾಪಿಸಿದರೆ, ಮತ್ತೊಂದನ್ನು ಮದ್ರಾಸಿನಲ್ಲಿ ಆನಿ ಬೆಸೆಂಟ್ ಸ್ಥಾಪಿಸಿದರು.

1914ರ ಮಧ್ಯಭಾಗದಲ್ಲಿ ತಿಲಕ್‌ರವರು ಸೆರೆಮನೆಯಿಂದ ಬಿಡುಗಡೆಯಾಗಿ ಬಂದಿದ್ದರು. ಸೆರೆಯಿಂದ ಬಿಡುಗಡೆಯಾಗಿ ಬಂದಾಗ ದೇಶದಲ್ಲಿ ಇದ್ದ ಪರಿಸ್ಥಿತಿ ಸೆರೆಗೆ ಹೋಗುವ ಮುನ್ನ ಇದ್ದುದಕ್ಕಿಂತ ಭಿನ್ನವಾಗಿದೆ ಎಂಬುದನ್ನು ತಿಲಕ್ ಮನಗಂಡರು. ಆ ಪರಿಸ್ಥಿತಿಗೆ ಅನುಗುಣವಾಗಿ ತಮ್ಮ ಪಕ್ಷದ ಧೋರಣೆಗಳಲ್ಲಿ, ಕಾರ್ಯಕ್ರಮಗಳಲ್ಲಿ ಕೆಲ ಬದಲಾವಣೆಗಳನ್ನು ಅವರು ಸೂಚಿಸಿದರು. ''ಇಂಗ್ಲೆಂಡಿನ ಅಗತ್ಯತೆಯೇ ಭಾರತದ ಅವಕಾಶ'' ಎಂಬ ಅರ್ಥವನ್ನು ಬಿಂಬಿಸುವ ಮಧ್ಯಮವರ್ಗದ ಹೊಸ ದೃಷ್ಟಿಕೋನವೇ ಈ ಬದಲಾವಣೆಗಳ ಮುಖ್ಯ ವಿಷಯವಾಗಿತ್ತು.

ತಮ್ಮ ರಾಜಕೀಯ ನೀತಿಯಲ್ಲಿ ತೀವ್ರಗಾಮಿ ಧೋರಣೆಗಳನ್ನು ಜಾರಿಗೆ ತಂದ ತಿಲಕ್‌ರವರು ಸ್ವರಾಜ್ಯವನ್ನು ದಕ್ಕಿಸಿಕೊಳ್ಳಲು ಚಳುವಳಿಗಳನ್ನು ನಡೆಯಿಸುವ ಅಗತ್ಯಕ್ಕೆ ಒತ್ತುಕೊಟ್ಟಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಇದು ಮಿತಗಾಮಿಗಳ ಧೋರಣೆಗಳಿಗೆ

ವಿರುದ್ಧವಾಗಿತ್ತು. ಯುದ್ಧದ ಸಂದರ್ಭದಲ್ಲಿ ಬ್ರಿಟಿಷರಿಗೆ ಭಾರತೀಯರ ನೆರವು ಹಿಂದೆಂದಿಗಿಂತಲೂ ಅಧಿಕವಾಗಿ ಅಗತ್ಯವಾಗಿದ್ದಾಗ, ತಿಲಕರು ಬ್ರಿಟಿಷರನ್ನು ವಿರೋಧಿಸುತ್ತಾರೆಂದು ಅನೇಕರು ಭಾವಿಸಿದ್ದರು. ಆದರೆ ತಿಲಕರು ಯುದ್ಧವನ್ನು ಗೆಲ್ಲಲು ಬ್ರಿಟಿಷರಿಗೆ ತಮ್ಮ ಸಂಪೂರ್ಣ ಸಹಕಾರವನ್ನು ಮುಕ್ತವಾಗಿ ಘೋಷಿಸಿದರು. ಜನರನ್ನು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಸೇನೆಗೆ ಭರ್ತಿ ಮಾಡಿಕೊಂಡು, 'ಪ್ರಜಾ ಸೇನೆ'ಯನ್ನು ರೂಪಿಸುವ ಸಲಹೆಯನ್ನು ತಿಲಕ್ ನೀಡಿದರು. ಬ್ರಿಟಿಷರ ಆಳ್ವಿಕೆಯಲ್ಲಿ ನಿಶ್ಶಸ್ತ್ರರಾಗಿಬಿಟ್ಟಿದ್ದ ಜನರಿಗೆ ಯುದ್ಧದ ಸಂದರ್ಭದಿಂದ ಸಿಗುವ ಶಸ್ತ್ರಾಸ್ತ್ರ ತರಬೇತಿ ಮತ್ತು ಅನುಭವಗಳು ಭಾರತದ ಭವಿಷ್ಯವನ್ನು ಬೆಳಗಿಸುವಲ್ಲಿ ಸಹಾಯಕಾರಿಯಾಗುತ್ತವೆ ಎಂದು ಅವರು ಭಾವಿಸಿದರು. ಇದೇ ಉದ್ದೇಶದಿಂದ, ಸೇನೆಗೆ ಹೆಚ್ಚು ಹೆಚ್ಚು ಜನರನ್ನು ಭರ್ತಿ ಮಾಡುವ ಕೆಲಸದಲ್ಲಿ ಅವರು ತೊಡಗಿಕೊಂಡರು.

ಇದು ತಿಲಕ್‌ರವರ ರಾಜಕೀಯ ನಿಲುವಿನ ಒಂದು ಮುಖ ಮಾತ್ರ. ತಿಲಕ್‌ರವರು ಸಂಘಟಿಸಿದ 'ಹೋ ರೂಲ್ ಲೀಗ್' ಅದರ ಇನ್ನೊಂದು ಮುಖ. ಬ್ರಿಟಿಷರ ಯುದ್ಧ ಪ್ರಯತ್ನಗಳಲ್ಲಿ ಭಾರತೀಯರು ಸಕ್ರಿಯವಾಗಿ ಪಾಲ್ಗೊಳ್ಳಬೇಕಾದರೆ, ಈ ಯುದ್ಧದ ಗೆಲುವು ಅವರ ರಾಜಕೀಯ ಉದ್ದೇಶಗಳು ಸಫಲವಾಗುವುದಕ್ಕೆ ಸಹಾಯಕವಾಗುತ್ತದೆ ಎಂಬುದನ್ನು ಅವರಿಗೆ ಮನಗಾಣಿಸಬೇಕು ಮತ್ತು ಭಾರತಕ್ಕೆ 'ಹೋಂ ರೂಲ್' ಅರ್ಥಾತ್ ಸ್ವರಾಜ್ಯ ಸಿಗಬೇಕು ಎಂದು ಅವರು ವಾದಿಸಿದರು.

ಇದರ ಪ್ರಕಾರವಾಗಿ 'ಹೋಂ ರೂಲ್ ಲೀಗ್' 1916ರಲ್ಲಿ ಮಹಾರಾಷ್ಟ್ರದಲ್ಲಿ ಸ್ಥಾಪನೆ ಹೊಂದಿತು. ಹೋಂ ರೂಲ್ ಲೀಗ್ ತಿಲಕ್‌ರವರ ನೇತೃತ್ವದಲ್ಲೇ ರಚನೆಯಾಯಿತಾದರೂ, ಅವರು ಆ ಸಂಸ್ಥೆಯಲ್ಲಿ ಯಾವ ಸ್ಥಾನವನ್ನೂ ವಹಿಸಿಕೊಳ್ಳಲಿಲ್ಲ. ಆದರೆ 'ಹೋಂ ರೂಲ್' ಕಲ್ಪನೆಗೆ ತಮ್ಮ ನಿಯತಕಾಲಿಕಗಳ ಮೂಲಕ ಆದಷ್ಟು ವಿಶಾಲವಾದ ವ್ಯಾಪ್ತಿಯಲ್ಲಿ ಪ್ರಚಾರ ನೀಡಿದರು. ಇಂತಹ ಸಂಸ್ಥೆಯನ್ನು ರಚಿಸುವ ಅಗತ್ಯವೇನೆಂಬುದನ್ನು ವಿವರಿಸುತ್ತಾ ಅವರು ಹೀಗೆ ಬರೆಯುತ್ತಾರೆ. ''ಹೋಂ ರೂಲ್ ಪರ ಜನಾಭಿಪ್ರಾಯ ಸಂಗ್ರಹಿಸಲು ಹಾಗೂ ಅದರ ಪರ ಚಳುವಳಿಗಳನ್ನು ಹೂಡಲು ಈಗ ಸಮಯ ಬಂದಿದೆ ಎನ್ನುವುದನ್ನು ಸಾಮಾನ್ಯವಾಗಿ ಒಪ್ಪಿಕೊಳ್ಳಲಾಗಿದೆ. ಈ ಜವಾಬ್ದಾರಿಯುತ ಕೆಲಸವನ್ನು ವಹಿಸಿಕೊಳ್ಳುವ ಅಧಿಕಾರ, ಸ್ವಾಭಾವಿಕವಾಗಿಯೇ, ಕಾಂಗ್ರೆಸ್ ಪಕ್ಷಕ್ಕೆ ಇತ್ತು. ಆದರೆ ಕಾಂಗ್ರೆಸ್‌ನ ಮಿತಗಾಮಿಗಳು ಹೋಂ ರೂಲ್ ಲೀಗ್ ಅನ್ನು ಸಂಘಟಿಸಬೇಕೆಂಬ ಈ ಪ್ರಸ್ತಾಪವನ್ನು ತಿರಸ್ಕರಿಸಿದರು. ಅವರ ಪ್ರಕಾರ ಕಾಂಗ್ರೆಸ್ ಆದಾಗಲೇ ಒಂದು ಸ್ವ ಸರ್ಕಾರದ ನೀತಿಯನ್ನು ರೂಪಿಸುವ ಕೆಲಸ ಕೈಗೊಂಡಿತ್ತು. ಕಾಂಗ್ರೆಸ್ ಯಾವುದೇ ನಿಯಂತ್ರಣವಿಲ್ಲದ, ನಿರ್ಬಂಧಯುತವಾದ (ಅಶಿಸ್ತಿನ) ಒಂದು ದೊಡ್ಡ ಪಕ್ಷ. ಆದ್ದರಿಂದ ಚಳುವಳಿಯ ರಾಜಕೀಯ ಸಫಲತೆಗಾಗಿ ಸಕ್ರಿಯವಾಗಿ ದುಡಿಯಲು ಅದಕ್ಕೆ ಸಾಧ್ಯವಿಲ್ಲ. ಹೀಗಾಗಿ, ಈ ಚಳುವಳಿಗೆ ಅಡಿಪಾಯ ಹಾಕಲು ಇನ್ನಾರಾದರೂ ಇರಲೇ ಬೇಕು. ಈ ವಿಷಯದಲ್ಲಿ ಇನ್ನು ಸಮಯವನ್ನು ವ್ಯರ್ಥ ಮಾಡಬಾರದು. ಈ ವಿಷಯದಲ್ಲಿ ನೇತೃತ್ವ ವಹಿಸಿಕೊಳ್ಳ ಬಯಸುವುದು 'ಲೀಗ್' ಒಂದೇ''

ತಿಲಕ್‌ರವರ ಬಿಡುಗಡೆಗೆ ಮುಂಚೆಯೇ ಆನಿ ಬೆಸೆಂಟ್ ಮದ್ರಾಸನ್ನು ಚಟುವಟಿಕೆಗಳ ಕೇಂದ್ರವಾಗಿಟ್ಟುಕೊಂಡ, ಹೋಂ ರೂಲ್‌ಗಾಗಿ ಚಳುವಳಿ ಆರಂಭಿಸಿದ್ದರು. ತಮ್ಮ ಚಟುವಟಿಕೆಗಳನ್ನು ಅವರು ಇಂಗ್ಲೆಂಡಿಗೂ ಹಬ್ಬಿಸಿದ್ದರು. ತಿಲಕ್‌ರವರು ಕಾಂಗ್ರೆಸ್‌ನವರಾಗಿರಲಿಲ್ಲ. ಆದರೆ ಶ್ರೀಮತಿ ಬೆಸೆಂಟ್ ಕಾಂಗ್ರೆಸ್ ನಾಯಕರುಗಳಲ್ಲಿ ಒಬ್ಬರೆಂದು ಪರಿಗಣಿಸಲ್ಪಟ್ಟಿದ್ದರು. ಆದ್ದರಿಂದ ಶ್ರೀಮತಿ ಬೆಸೆಂಟ್ ಹೋಂ ರೂಲ್‌ನ ಕೆಲಸ ಕಾರ್ಯಗಳಲ್ಲಿ ನಿರತವಾಗುವಂಥ ''ಹೋಂ ರೂಲ್ ಲೀಗ್'' ಎಂಬ ಪ್ರತ್ಯೇಕ ಸಂಸ್ಥೆಯ ರಚನೆಗಾಗಿ ಕಾಂಗ್ರೆಸ್ ಸಭೆಯೊಂದರಲ್ಲಿ ಮಸೂದೆಯನ್ನು ಮಂಡಿಸಿದರು. ಕಾಂಗ್ರೆಸ್ ಈ ಮಸೂದೆಯನ್ನು ತಿರಸ್ಕರಿಸಿತು. ಅದರ ಬದಲಿಗೆ, ಸ್ವಸರ್ಕಾರದ ನೀತಿಯನ್ನು ರೂಪಿಸಲು ಸಮಿತಿಯೊಂದನ್ನು ರಚಿಸಿ, ಶ್ರೀಮತಿ ಆನಿ ಬೆಸೆಂಟ್‌ರವರನ್ನು ಅದರ ಸದಸ್ಯರನ್ನಾಗಿ ನೇಮಕ ಮಾಡಿತು. ಸಮಿತಿಯು ತನ್ನ ಕೆಲಸಗಳನ್ನು ಮುಗಿಸುವವರೆಗೂ ಶ್ರೀಮತಿ ಬೆಸೆಂಟ್ ಕಾಂಗ್ರೆಸ್‌ನ ನಿರ್ಧಾರವನ್ನು ಪಾಲಿಸಲೇಬೇಕಾಯಿತು. ಕಾಂಗ್ರೆಸ್‌ಗೆ ಎದುರಾಡದೆಯೇ, ಸಮಿತಿಯ ಕಾರ್ಯಸಮಾಪ್ತಿಯಾದ ಕೂಡಲೆ, 'ಹೋಂ ರೂಲ್ ಲೀಗ್' ಅನ್ನು ಸ್ಥಾಪಿಸಲು ಅವರು ಸರ್ವಸ್ವತಂತ್ರರಾದರು. ಹೀಗೆ 1916ರ ಸೆಪ್ಟೆಂಬರ್‌ನಲ್ಲಿ ಮದ್ರಾಸಿನಲ್ಲಿ ಹೋಂ ರೂಲ್ ಲೀಗಿನ ಸ್ಥಾಪನೆಯಾಯಿತು.

ಹೋಂ ರೂಲ್ ಲೀಗ್ ಪ್ರತ್ಯೇಕ ನಾಯಕತ್ವದಿಂದ ಕೂಡಿದ ಎರಡು ಪ್ರತ್ಯೇಕ ಸಂಸ್ಥೆಗಳಾಗಿ ರೂಪುಗೊಂಡವಾದರೂ, ಅವುಗಳ ಉದ್ದೇಶ ಹಾಗೂ ತತ್‌ಕ್ಷಣದ ಕಾರ್ಯಕ್ರಮಗಳು ಏಕರೂಪದ್ದೇ ಆಗಿದ್ದವು. ಬ್ರಿಟಿಷ್ ಅಧಿಪತ್ಯದಲ್ಲಿ ಗರಿಷ್ಠ ಸ್ವಾಯತ್ತತೆಯ ಬೇಡಿಕೆ ಸಲ್ಲಿಸಿ, ಇದು ಇಂಗ್ಲೆಂಡಿನ ಸ್ವಂತ ನೆಲದಲ್ಲೂ ಪ್ರತಿಧ್ವನಿಸುವಂತೆ ಜನಜಾಗೃತಿ ಮೂಡಿಸಿ, ಜನಾಂದೋಳನಗಳನ್ನು ಜನಪ್ರಿಯಗೊಳಿಸುವ ಉದ್ದೇಶದಿಂದ ಇಬ್ಬರೂ ದುಡಿದರು.

ಶ್ರೀಮತಿ ಬೆಸೆಂಟ್‌ರವರ ಮಾತಿನಲ್ಲೇ ಹೇಳುವುದಾದರೆ, 'ಭಾರತದ ಸ್ವಾತಂತ್ರ್ಯವೇ ಭಾರತದ ನಿಷ್ಠೆಯ ಬೆಲೆ'. ಇನ್ನೂ ಬಿಡಿಸಿ ಹೇಳಬೇಕೆಂದರೆ, ಯುದ್ಧ ತಂದೊಡ್ಡಿದ ಪರಿಸ್ಥಿತಿಯನ್ನು ನಿಭಾಯಿಸಲು ಇಂಗ್ಲೆಂಡ್ ಭಾರತದ ನೆರವನ್ನು ಬೇಷರತ್ತಾಗಿ ನೀಡಬೇಕೆಂದು ಅಪೇಕ್ಷಿಸಬಾರದು. ಸ್ವಾತಂತ್ರ್ಯ ಭಾರತದ ಹಕ್ಕು

ಎಂಬುದನ್ನು ಒಪ್ಪಿಕೊಂಡರೆ ಮಾತ್ರ ಇಂಗ್ಲೆಂಡಿಗೆ ಭಾರತದ ಸಂಪೂರ್ಣ ಸಹಕಾರ ಸಿಕ್ಕೀತು.

ಅನಂತರ, ಕಾಂಗ್ರೆಸ್ ಪಕ್ಷದ ಅಧ್ಯಕ್ಷೆಯಾಗಿ ಆಯ್ಕೆಯಾದ ಶ್ರೀಮತಿ ಬೆಸೆಂಟ್ ತಮ್ಮ ಅಧ್ಯಕ್ಷ ಭಾಷಣದಲ್ಲಿ ಹೀಗೆ ಹೇಳಿದರು :

''ಯುದ್ಧದ ಆರಂಭದಲ್ಲಿ, ಭಾರತದಲ್ಲಿ ಮತ್ತು ಯೂರೋಪಿನಲ್ಲಿ ನಿರಂಕುಶ ಪ್ರಭುತ್ವ ಮತ್ತು ದಬ್ಬಾಳಿಕೆ ಕೊನೆಗೊಳ್ಳಬೇಕೆಂದು ಇಂಗ್ಲೆಂಡ್ ಒಪ್ಪಿಕೊಳ್ಳುವವರೆಗೆ ಈ ಯುದ್ಧ ಸಮಾಪ್ತಿಯಾಗಲಾರದು ಎಂದು ಹೇಳುವ ಸಾಹಸ ನಾನು ಮಾಡಿದ್ದೆ. ಕಲ್ಕತ್ತೆಯ ಮಾನ್ಯ ಬಿಷಪ್ಪರು, ಒಂದು ಸರ್ವಸ್ವತಂತ್ರ ಜನಾಂಗದ ಧೈರ್ಯಕ್ಕೆ ತಕ್ಕುದಾಗಿಯೇ, ಯೂರೋಪಿನಲ್ಲಿ ನಿರಂಕುಶ ಪ್ರಭುತ್ವ ಕೊನೆಗಾಣಲಿ ಎಂದು ಹಾರೈಸುತ್ತಾ ಭಾರತದಲ್ಲಿ ಅದನ್ನು ಜಾರಿಯಲ್ಲಿಟ್ಟಿರುವುದು ಆಷಾಡಭೂತಿತನ'' ಎಂದು ಇತ್ತೀಚೆಗೆ ಘೋಷಿಸಿದರು.

ಭಾರತ ಎರಡು ಕಾರಣಗಳಿಗಾಗಿ ಸ್ವರಾಜ್ಯ ಬಯಸುತ್ತದೆಯೆಂದು ಅವರು ಹೇಳಿದರು. ಮೊದಲನೆಯದು ಅನಿವಾರ್ಯವಾದ, ಅತ್ಯಂತ ಮಹತ್ತ್ವದ ಕಾರಣ, ಎರಡನೆಯ ಕಾರಣ ಅಷ್ಟೇ ಮಹತ್ತ್ವದ್ದಲ್ಲವಾದರೂ, ಅದಕ್ಕೆ ತನ್ನದೇ ಆದ ಪ್ರಾಮುಖ್ಯತೆ ಇತ್ತು. ಮೊದಲನೇ ಕಾರಣ ಯಾವುದೆಂದರೆ, ಪ್ರತಿ ರಾಷ್ಟ್ರಕ್ಕೂ ಸ್ವಾತಂತ್ರ್ಯವೆಂಬುದು ಅದರ ಜನ್ಮಸಿದ್ಧ ಹಕ್ಕು ಆಗಿರುತ್ತದೆ. ಭಾರತದ ಹಿತಾಸಕ್ತಿಗಳನ್ನು, ಹಕ್ಕು ಬಾಧ್ಯತೆಗಳನ್ನು ಸ್ವಾರ್ಥೋದ್ದೇಶಪೂರಿತ ಬ್ರಿಟಿಷ್ ಚಕ್ರಾಧಿಪತ್ಯವು, ಭಾರತದ ಒಪ್ಪಿಗೆಯಿಲ್ಲದೆಯೇ ತನ್ನ ವಶಕ್ಕೆ ತೆಗೆದುಕೊಂಡಿತ್ತು. ಎರಡನೆಯ ಕಾರಣವೇನೆಂದರೆ, ಭಾರತದ ಆರ್ಥಿಕ ಸಂಪನ್ಮೂಲಗಳನ್ನು ಭಾರತಕ್ಕೆ ಪ್ರಯೋಜನವಾಗುವ ರೀತಿಯಲ್ಲಿ ಬಳಸಿಕೊಳ್ಳಲಾಗುತ್ತಿರಲಿಲ್ಲ. ಈ ಅಂಶ, ಭಾರತದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ತಗಲುತ್ತಿದ್ದ ವೆಚ್ಚವನ್ನು ಸಾಮ್ರಾಜ್ಯಶಾಹಿಗಳ ಆಕ್ರಮಣಕಾರೀ ಸೇನೆಯ ನಿರ್ವಹಣೆಗೆ ತಗಲುತ್ತಿದ್ದ ವೆಚ್ಚಕ್ಕೆ ಹೋಲಿಸಿದಾಗ ಸ್ಪಷ್ಟವಾಗುತ್ತಿತ್ತು.

ಹೋಂ ರೂಲ್ ಲೀಗ್ ತಿಲಕ್ ಹಾಗೂ ಶ್ರೀಮತಿ ಬೆಸೆಂಟ್‌ರವರ ಪ್ರತ್ಯೇಕ ನಾಯಕತ್ವಗಳಲ್ಲಿ ಎರಡು ಪ್ರತ್ಯೇಕ ಸಂಸ್ಥೆಗಳಾಗಿಯೇ ರಚಿತವಾಯಿತು. ಆದರೆ ಈ ಮೂಲಕ ಉದಯಿಸಿದ ಹೋಂ ರೂಲ್ ಚಳುವಳಿ ಭಾರತದ ರಾಜಕೀಯ ಇತಿಹಾಸದ ಒಂದು ಪ್ರಮುಖ ಘಟನೆಯಂತೂ ಹೌದು. ಅನಿ ಬೆಸೆಂಟ್ ನಾಯಕತ್ತ್ವದ ಹೋಂ ರೂಲ್ ಲೀಗಿನ ಅಧ್ಯಕ್ಷರಾಗಿದ್ದ ಸರ್ ಸುಬ್ರಹ್ಮಣ್ಯ ಅಯ್ಯರ್‌ರವರು (ಜಡ್ಜ್ ಆಗಿದ್ದವರು; ಹಂಗಾಮಿ ಮುಖ್ಯ ನ್ಯಾಯಾಧೀಶರು) ಸಂಯುಕ್ತ ರಾಷ್ಟ್ರದ ಅಧ್ಯಕ್ಷ ವಿಲ್ಸನ್‌ರವರಿಗೆ ಹೀಗೆ ಪತ್ರ ಬರೆದರು : ''ಇಂದು ನಮ್ಮದೊಂದು ಗುಲಾಮ ದೇಶ. ನಾವು ದಾಸ್ಯ ಸಂಕೋಲೆಯಿಂದ ಬಿಗಿಯಲ್ಪಟ್ಟಿದ್ದೇವೆ. ಆದರೆ ನಮಗೆ ಸ್ವರಾಜ್ಯ ಸಿಗುವ ಆಶ್ವಾಸನೆ ದೊರೆತ ಕೂಡಲೆ ಮೂರು ಮೂರು ತಿಂಗಳುಗಳ ಅವಧಿಯಲ್ಲಿ 50-50 ಲಕ್ಷ ಮಂದಿಯನ್ನು ಯುದ್ಧಕ್ಕೆ ಕಳಿಸಬಲ್ಲೆವು''.

ಅಯ್ಯರ್‌ರವರ ಈ ಪತ್ರ ಅಂತರರಾಷ್ಟ್ರೀಯ ಮಟ್ಟದಲ್ಲಿ ಅಲ್ಲೋಲ ಕಲ್ಲೋಲ ಉಂಟುಮಾಡಿತು. ಇದು ಸಂಯುಕ್ತ ರಾಷ್ಟ್ರದ ಕಾಂಗ್ರೆಸ್‌ನ ಗಮನಕ್ಕೂ ಬಂದಿತು. ಭಾರತೀಯರ ಬೇಡಿಕೆಗಳಿಗೆ ಒಡಂಬಡದ ಬ್ರಿಟನ್ನಿನ ನೀತಿಯನ್ನು ಇತರ ಅನೇಕ ರಾಷ್ಟ್ರಗಳು ಟೀಕಿಸಿದವು. ಇಂಗ್ಲೆಂಡಿನಲ್ಲೂ, ಈ ಪತ್ರ ಹುಯಿಲೆಬ್ಬಿಸಿತು. ಮೊಂಟಗು, ಭಾರತದ ರಾಜ್ಯ ಕಾರ್ಯದರ್ಶಿ ಇದನ್ನು 'ನಾಚಿಕೆಗೇಡು' ಎಂದು ಬಣ್ಣಿಸಿದರು. ಈ ಟೀಕೆಯ ಪ್ರತಿಭಟನಾರೂಪವಾಗಿ ಅಯ್ಯರ್ ತಮ್ಮ 'ನೈಟ್‌ಹುಡ್' ಮತ್ತು 'ದಿವಾನ್ ಬಹಾದ್ದೂರ್' ಬಿರುದುಗಳನ್ನು ಹಿಂತಿರುಗಿಸಿದರು. ಯುದ್ಧ ಸಮಾಪ್ತಿಯ ಸಮಯದಲ್ಲಿ ನಡೆದಿದ್ದ ಶಾಂತಿ ಅಧಿವೇಶನದ ಅಧ್ಯಕ್ಷರಿಗೂ ತಿಲಕ್‌ರವರು ಪತ್ರ ಬರೆದರು. ಸ್ಥಾಪಿಸಲು ಉದ್ದೇಶಿಸಲಾಗಿರುವ ವಿಶ್ವಸಂಸ್ಥೆಗೆ ಸ್ವತಂತ್ರ ಭಾರತವು ಮಹಾನ್ ಶಕ್ತಿಯ ಮೂಲವಾಗಿರುತ್ತದೆ ಎಂದು ಅವರು ತಮ್ಮ ಪತ್ರದಲ್ಲಿ ತಿಳಿಸಿದ್ದರು.

ಹೋಂ ರೂಲ್ ಚಳುವಳಿಯ ನಾಯಕರುಗಳು ವಿದೇಶೀ ಸರ್ಕಾರಗಳಿಗೆ ಪತ್ರ ಬರೆಯುವುದಕ್ಕೆ ಮಾತ್ರ ತಮ್ಮನ್ನು ಸೀಮಿತಗೊಳಿಸಿಕೊಳ್ಳಲಿಲ್ಲ. ಭಾರತದ ಸ್ವರಾಜ್ಯದ ಸಮಸ್ಯೆಯತ್ತ ಅಮೆರಿಕದ ಪ್ರಜೆಗಳ ಗಮನ ಸೆಳೆಯಲು ಲಾಲಾ ಲಜ್‌ಪತ್‌ರಾಯ್ ನೇತೃತ್ವದ ಪ್ರತಿನಿಧಿಗಳ ತಂಡವೊಂದನ್ನು ಸಂಯುಕ್ತರಾಷ್ಟ್ರಕ್ಕೆ ಕಳುಹಿಸಲಾಯಿತು. ಈ ತಂಡದ ಸದಸ್ಯರಾಗಿ ಹೋಗಿದ್ದ ಎನ್.ಎಸ್. ಹರ್ಡೀಕರ್‌ರವರು ಕಳುಹಿಸಿದ ವರದಿಯ ಪ್ರಕಾರ ಅವರು 83 ಸ್ಥಳಗಳಲ್ಲಿ ಸಭೆಯನ್ನುದ್ದೇಶಿಸಿ ಮಾತನಾಡಿದರು. ಅಲ್ಲಿನ ಕಾಲೇಜುಗಳು, ಪತ್ರಿಕಾಲಯ ಹಾಗೂ ಇನ್ನಿತರ ಸಂಸ್ಥೆಗಳಲ್ಲಿ ಅವರಿಗೆ ವಿಶೇಷ ಸ್ವಾಗತ ದೊರಕಿತು.

ತಿಲಕ್ ಮತ್ತು ಶ್ರೀಮತಿ ಬೆಸೆಂಟ್‌ರವರು ಬ್ರಿಟನ್ ಹಾಗೂ ಅದರ ಮಿತ್ರರಾಷ್ಟ್ರಗಳ ನಿರಂಕುಶ ಪ್ರಭುತ್ವದ ವಿರುದ್ಧ ಸೊಲ್ಲೆತ್ತಿದ್ದ ಇಂಗ್ಲೆಂಡಿನ ಪ್ರಜಾಪ್ರಭುತ್ವವಾದಿ ಬೆಂಬಲವನ್ನು ದೊರಕಿಸಿಕೊಳ್ಳುವ ಪ್ರಯತ್ನಗಳನ್ನು ಮಾಡಿದರು. ಈ ಪ್ರಯತ್ನಗಳ ಹಿಂದೆ ಭಾರತದ ಜನತೆ ಒಂದೆಡೆ ಇದ್ದರೆ, ಮತ್ತೊಂದೆಡೆ ಆತ್ಮವಿಶ್ವಾಸ ಮೂಡಿಸಿಕೊಳ್ಳುತ್ತಲಿದ್ದ ಮಧ್ಯಮ ವರ್ಗ ಇತ್ತು. ಹೀಗೆ, ಒಂದು ದಶಕಕ್ಕೂ ಮೊದಲೇ ಕಾಂಗ್ರೆಸ್‌ನಿಂದ ಹೊರಹಾಕಲ್ಪಟ್ಟ ತೀವ್ರಗಾಮಿಗಳ ನೇತೃತ್ವದಲ್ಲಿ ಭಾರತ ಒಂದು ನಿರ್ದಿಷ್ಟ ಉದ್ದೇಶ ಮತ್ತು ಸ್ಪಷ್ಟ ಮುನ್ನೋಟವಿದ್ದ ರಾಜಕೀಯ ತುಡಿತವನ್ನು ಅನುಭವಿಸಿತು. ಈ ಚಳುವಳಿಯ ಹಾಗೂ ಸಂಸ್ಥೆಯ ಹೆಸರಿನ ಬಗ್ಗೆ ಒಂದು ಮಾತು. ಈಗಾಗಲೇ ವಿಶದವಾಗಿರುವಂತೆ, ತಿಲಕ್‌ರವರ ನೇತೃತ್ವದಲ್ಲಿ ತೀವ್ರಗಾಮಿಗಳು ಹಮ್ಮಿಕೊಂಡ, ಆ ನಂತರ ಕಾಂಗ್ರೆಸ್

ಸಹ ಅಂಗೀಕರಿಸಿದ ಚಳುವಳಿಯ ಉದ್ದೇಶ - ''ಸ್ವರಾಜ್ಯ''. ಸ್ವರಾಜ್ಯ ಎಂಬ ಪದದ ಬದಲು ಹೋಂ ರೂಲ್ ಎಂಬ ಪದವನ್ನೇ ಆಯ್ಕೆ ಮಾಡಿಕೊಂಡಿದ್ದಕ್ಕೂ ಒಂದು ಇತಿಹಾಸವಿದೆ. ಆ ದಿನಗಳಲ್ಲಿ ಐರ್ಲೆಂಡಿನ ಜನತೆ ಸಹ ತೀವ್ರ ಕದನದಲ್ಲಿ ತೊಡಗಿತ್ತು. ಆ ಕಾದಾಟದಲ್ಲಿ ''ಹೋಂ ರೂಲ್ ಫಾರ್ ಐರ್ಲೆಂಡ್'' ಎಂಬುದೇ ಮುಖ್ಯ ಘೋಷಣೆಯಾಗಿತ್ತು. ಇದು ಭಾರತದಲ್ಲೂ ಪ್ರತಿಧ್ವನಿಸಿತು. ಹೋಂ ರೂಲ್ ಎಂಬ ಪದ ಐರಿಷ್ ಜನತೆ ಹೋರಾಡುತ್ತಿದ್ದ ಉದ್ದೇಶಗಳಿಗಾಗಿಯೇ ಭಾರತದ ಜನತೆ ಸಹ ಹೋರಾಟ ನಡೆಸುತ್ತಿದ್ದ ಎಂಬ ಅರ್ಥ ಕೊಟ್ಟಿತ್ತು.

ಐರ್ಲೆಂಡಿನ ಜನತೆ ಬಳಸುತ್ತಿದ್ದ ಹೋರಾಟದ ವಿಧಾನಗಳನ್ನೇ ಇಲ್ಲಿಯೂ ಬಳಸಬಹುದೆಂಬ ಸೂಚನೆಯೂ ಆ ಪದದಲ್ಲಿತ್ತು. ಐರ್ಲೆಂಡಿನಲ್ಲಿ 1916ರಲ್ಲಿ ನಡೆದ ಹೋಂ ರೂಲ್ ಚಳುವಳಿ ಕ್ರಾಂತಿಕಾರಿ ಪಥಕ್ಕೆ ಹೊರಳಿ, 'ಈಸ್ಟರ್ ರಿವೋಲ್ಟ್' ಎಂದೇ ಹೆಸರುವಾಸಿಯಾಯಿತು. ಇದರಿಂದ ಪ್ರೇರಿತರಾದ ಸಾವಿರಾರು ಮಂದಿ ಭಾರತೀಯರು 'ಹೋಂ ರೂಲ್ ಲೀಗ್' ಲಾಂಛನವನ್ನು ಮೆರವಣಿಗೆ ನಡೆಸಿದರು. ಭಾರತ ಹಿಂದೆಂದೂ ಕಂಡಿರದಂಥ ಅಗಾಧವಾದ ಚಳುವಳಿ ಅದಾಗಿತ್ತು. ●

## ಪ್ರೀತಿಯ ಅಚಲ

ಈ ಬಾರಿ ಎರಡು ಪುಟ್ಟ ಕಥೆಗಳು

ಕಥೆ 1 : ನಮ್ಮ ಪರಿಚಿತರ ಮಗಳಿಗೆ ಮದುವೆಯಾಯಿತು. ಮದುವೆಯಾದ ಮರುದಿನದಿಂದಲೇ ಅತ್ತೆ ಗಂಡ ಮಾವನಿಂದ ಹುಡುಗಿಗೆ ಕಿರುಕುಳ ಪ್ರಾರಂಭ. ವರದಕ್ಷಿಣೆಗಾಗಿ ಪೀಡಿಸುವುದು, ಅವಳ ಅಪ್ಪ ಅಮ್ಮಂದಿರನ್ನು ಆಡಿಕೊಳ್ಳುವುದು, ಹುಡುಗಿ ಕೂತರೆ ತಪ್ಪು, ನಿಂತರೆ ತಪ್ಪು. ಹುಡುಗಿಗೆ ಆರೇ ತಿಂಗಳಲ್ಲಿ ಹುಚ್ಚು ಹಿಡಿಯುವ ಪರಿಸ್ಥಿತಿ ನಿರ್ಮಾಣ! ತಂದೆ ತಾಯಿಯರು ಎಚ್ಚೆತ್ತರು, ಹುಡುಗಿಯನ್ನು ತಮ್ಮ ಮನೆಗೆ ಕರೆತಂದರು. ಕೋರ್ಟಿಗೆ ಹೋದರು. ವಿಚ್ಛೇದನ ಪಡೆದರು. ಹುಡುಗಿ ಜಾಣೆ. ಈ ಎಲ್ಲ ಕಿರುಕುಳದ ನಡುವೆಯೇ ಓದಿ ಎಂ.ಕಾಂ. ಪಾಸು ಮಾಡಿ ಬ್ಯಾಂಕಿನಲ್ಲಿ ನೌಕರಿ ಪಡೆದಳು. ಇಷ್ಟೇ ಆಗಿದ್ದರೆ ಈ ಸುದ್ದಿಗೆ ಏನೂ ಮಹತ್ವವಿಲ್ಲ. ಮುಂದಿನದು ಸ್ವಾರಸ್ಯ. ಹುಡುಗಿಯ ತಂದೆಗೆ ಆಪ್ತ ಸ್ನೇಹಿತರೊಬ್ಬರಿದ್ದರು. ಮಗಳಿಗೆ ವಿಚ್ಛೇದನ ಸಿಕ್ಕಿ ಮನಸ್ಸಿಗೆ ನಿರಾಳವಾದ ದಿನ ಆತ ತನ್ನ ಸ್ನೇಹಿತರಿಗೆ ಫೋನು ಮಾಡಿ ವಿಷಯ ತಿಳಿಸಿ ತನ್ನ ಮನಸ್ಸಿನ ನಿರಾಳತೆಯನ್ನು ಹಂಚಿಕೊಂಡರು. ಅದೇ ದಿನ ಸ್ನೇಹಿತರ ಮನೆಯಲ್ಲಿ ರಾತ್ರಿ ಮನೆ ಮಂದಿಯೆಲ್ಲಾ ಕುಳಿತು ಊಟ ಮಾಡುತ್ತಿದ್ದ ಸಮಯದಲ್ಲಿ ಈ ಸುದ್ದಿಯೂ ಬಂತು. ಸ್ನೇಹಿತರ ಮದುವೆಗಿದ್ದ ಎರಡನೆ ಮಗ ''ಅಪ್ಪ ನೀವೆಲ್ಲ ಒಪ್ಪಿದರೆ ನಾನು ಆ ಹುಡುಗಿಯನ್ನು ಮದುವೆಯಾಗುತ್ತೇನೆ'' ಅಂದ. ತಮಾಷೆಯೆಂದರೆ ಇದೇ ಭಾವ ಅದೇ ಸಮಯದಲ್ಲೇ ಮನೆಮಂದಿಯ ಮನಸ್ಸಿನಲ್ಲೆಲ್ಲಾ ಸುಳಿದಿದ್ದು. ಎಲ್ಲರೂ ಒಮ್ಮತದಿಂದ ಒಪ್ಪಿಕೊಂಡು ಊಟ ಮುಗಿದು ರಾತ್ರಿ 10 ಗಂಟೆಯಾಗಿದ್ದರೂ ಲೆಕ್ಕಿಸದೆ ಹುಡುಗಿಯ ಮನೆಗೆ ಧಾವಿಸಿ ವಿಷಯ ತಿಳಿಸಿದ್ದು, ಹುಡುಗಿಯ ಮನಸ್ಸು ಒಂದು ಮದುವೆಯಿಂದ ಆದ ಅನಾಹುತದಿಂದ ಕದಡಿ ರಾಡಿಯಾಗಿದ್ದು, ಅದು ತಿಳಿಯಾಗುವವರೆಗೆ ಈ ಜನ ಕಾದಿದ್ದು, ನಂತರ ಅತ್ಯಂತ ಸರಳವಾಗಿ ಮದುವೆಯೂ ಆಗಿ, ಈಗ ಹುಡುಗಿ ನೆಮ್ಮದಿಯಿಂದಿರುವುದು. ಇದು ಬಹುಶಃ ಯಾವ ಬೆಳ್ಳಿತೆರೆಗೂ ನಿಲುಕದ ಕಥೆ. ಹತ್ತು ಹುಡುಗರಲ್ಲಿ ಒಬ್ಬನಿಗಾದರೂ ಇಂಥ ಮನಸ್ಸಿದ್ದರೆ ತಮ್ಮ ತಪ್ಪೇ ಇಲ್ಲದೆ ನರಳುತ್ತಿರುವ ಹೆಣ್ಣು ಮಕ್ಕಳಿಗೆ ಒಳ್ಳೆಯ ಬದುಕನ್ನು ಕೊಡಬಹುದಲ್ಲವೇ?

ಕಥೆ 2 : ಆತ ಡಾಕ್ಟರ್, ಅವಳು ಇಂಟೀರಿಯರ್ ಡೆಕೋರೇಟರ್. ಮದುವೆಯಾಯಿತು. ಕೆಲವೇ ದಿನಗಳಲ್ಲಿ ಆತನಿಗೆ ಅಮೆರಿಕೆಯ ವಿಶ್ವವಿದ್ಯಾಲಯದಲ್ಲಿ ಹೆಚ್ಚಿನ ವ್ಯಾಸಂಗಕ್ಕಾಗಿ ಸೀಟು ಸಿಕ್ಕಿತು. ಇದ್ದ ಸರ್ಕಾರಿ ಉದ್ಯೋಗ ತ್ಯಜಿಸಿದ. ಅಮೆರಿಕೆಗೆ ಹಾರಲು ಸಿದ್ಧನಾದ. ಆದರೆ ವೀಸಾ ಕೊಡುವ ಮಂದಿ ಭಾರತೀಯ ವೈದ್ಯರನ್ನು ಅಮೆರಿಕದ ನೆಲ ಮುಟ್ಟಲು ಬಿಲ್‌ಕುಲ್ ಬಿಡುವುದಿಲ್ಲವೆಂದರು. ಮುಂದೇನು? ಪ್ರಶ್ನೆ ಕಾಡಿತು. ಹೆಂಡತಿ ಹೇಳಿದಳು ''ಭಾರತದಲ್ಲೇ ಮುಂದೆ ಓದಿ ಹೇಗೂ ನಾನು ದುಡಿಯುತ್ತೇನಲ್ಲ, ನನ್ನ ಸಂಬಳದಲ್ಲೇ ನಿಭಾಯಿಸೋಣ'' ಬೆಂಗಳೂರಿನ ಖಾಸಗಿ ಕಂಪನಿಯ ಉದ್ಯೋಗಸ್ಥೆಯಾಗಿರುವ ಅವಳಿಗೆ ಪರ್ಸ್‌ಭಾರವಾಗುವಂತಹ ವೇತನವೇನೂ ಬರುವುದಿಲ್ಲ. ಆದರೂ ಅವರು ಖುಷಿಯಾಗಿದ್ದಾರೆ. ಆತ ಮನೆಯಲ್ಲಿ ಕುಳಿತು ಮುಂದಿನ ಓದಿನ ತಯಾರಿ ನಡೆಸಿದ್ದಾನೆ. ಅವಳು ಅರ್ಧ ಅಡಿಗೆ ಮುಗಿಸಿ ಆಫೀಸಿಗೆ ಹೊರಡುತ್ತಾಳೆ. ಅವನು ಅದನ್ನು ಪೂರ್ತಿ ಮಾಡಿ ಮುಗಿಸುತ್ತಾನೆ. ಅವಳು ಆಫೀಸಿಗೆ ಹೊರಡುವ ಮುನ್ನ ಅವನು ಲೂನಾವನ್ನು ಸ್ಟಾರ್ಟ್ ಮಾಡಿ ಕಾಯುತ್ತಾ ನಿಂತಿದ್ದು ಅವಳು ಬಂದ ನಂತರ ಅವಳಿಗೆ ಒಪ್ಪಿಸುತ್ತಾನೆ. 2 ಗಂಟೆಗೆ ಊಟಕ್ಕಾಗಿ ಬಾಗಿಲಲ್ಲಿ ನಿಂತು ಅವಳಿಗಾಗಿ ಕಾಯುತ್ತಿರುತ್ತಾನೆ. ಅವನು ಹಳ್ಳಿಯಲ್ಲಿರುವ ತಂದೆ ತಾಯಿಗಳಿಗೆ ಕಾಗದ ಬರೆದಿಡುತ್ತಾನೆ. ಅವಳು ಆಫೀಸಿಗೆ ಹೋಗುತ್ತಾ ಪೋಸ್ಟ್ ಮಾಡುವುದಾಗಿ ಹೇಳುತ್ತಾಳೆ. ಅವನು ಸಂಜೆ ಹೊತ್ತಿಗೆ ನೀಟಾಗಿ ಡ್ರೆಸ್ ಮಾಡಿಕೊಂಡು ಕಾಯುತ್ತಿರುತ್ತಾನೆ. ಬೆಳಗಿನಿಂದ ಓದಿ ಓದಿ ಚಿಟ್ಟು ಹಿಡಿದ ಮನಸ್ಸಿಗೆ ಫ್ರೆಷ್‌ನೆಸ್ ನೀಡಲು ಅವಳು ಬಂದ ತಕ್ಷಣ ವಾಕಿಂಗ್ ಹೊರಡುತ್ತಾರೆ. ಸಂಪ್ರದಾಯಬದ್ಧವಾಗಿ ವ್ಯವಸ್ಥೆಗೊಂಡ ಸಮಾಜದ ಸ್ಥಾನಗಳು ಇಲ್ಲಿ ಅದಲು ಬದಲಾಗಿದೆ ಅಷ್ಟೆ. ಆದರೂ ಆಕಾಶವೇನೂ ಕಳಚಿಬಿದ್ದಿಲ್ಲ. ಅವನೇನೂ ಕುಸಿದಿಲ್ಲ. ಅವಳೇನೂ ಗರ್ವದಿಂದ ಗಂಡನನ್ನು ಧಿಕ್ಕರಿಸಿ ನಿಂತಿಲ್ಲ. ಖುಷಿ ಖುಷಿಯಾಗಿ ಬದುಕು ಸಾಗುತ್ತಿದೆ. ಮುಂದಿನ ಮಹತ್ವಾಕಾಂಕ್ಷೆಯ ಜೀವನಕ್ಕೆ ನೆಮ್ಮದಿಯಿಂದ ಸಿದ್ಧತೆ ನಡೆಸುತ್ತಿದ್ದಾರೆ.

ಈ ಎರಡೂ ಕಥೆಗಳ ನಾಯಕರಂಥ ಆರೋಗ್ಯವಂತ ಮನಸ್ಸಿನ ಪುರುಷರನ್ನೇ ಅಲ್ಲವೇ ಸ್ತ್ರೀವಾದಿ ಸಮಾಜ ಬಯಸುತ್ತಿರುವುದು??

**ಶತಭಿಷಾ**

# ಮಹಾಶ್ವೇತಾದೇವಿ ಕಾದಂಬರಿಗಳಲ್ಲಿ ವೇದನೆ ಮತ್ತು ಹೋರಾಟ

'ಶ್ರೀ ಗಣೇಶ ಮಹಿಮಾ' ಎಂಬ ತಮ್ಮ ಕಾದಂಬರಿಯ ತೆಲುಗು ಅನುವಾದಕ್ಕಾಗಿ ಬರೆದ ವಿಶೇಷ ಮುನ್ನುಡಿಯಲ್ಲಿ ಮಹಾಶ್ವೇತಾದೇವಿಯವರು 1982ರಲ್ಲಿ ಹೇಳಿದ್ದು ಆಂಧ್ರದ ಜನತೆಯ ಸಂಕಷ್ಟ ಮತ್ತು ಹೋರಾಟಗಳಿಂದಾಗಿ ಅವರ ಬಗ್ಗೆ ತಮಗೆ ಅತೀವ ಗೌರವವಿದೆಯೆಂದು. ಹೈದರಾಬಾದಿನಲ್ಲಿ ಈಚೆಗೆ ಒಂದು ಸಂದರ್ಶನದಲ್ಲಿ ಆಂಧ್ರದ ಅಲ್ಲೂರಿ ಸೀತಾರಾಮರಾಜು ಅವರ ಹೋರಾಟವನ್ನು ವಸ್ತುವಾಗಿಸಿಕೊಂಡು ಕಾದಂಬರಿಯೊಂದನ್ನು ಬರೆಯುವುದಾಗಿ ಆಕೆ ಹೇಳಿದ್ದಾರೆ. ಬಿರ್ಸಾ ಮುಂಡಾನ ವ್ಯಕ್ತಿತ್ವದ ತಾರ್ಕಿಕ ಬೆಳವಣಿಗೆಯಾಗಿ ರಾಜು ಅವರನ್ನು ಕಾಣುವುದು ಸಹಜವಾಗಿದೆ. ಬ್ರಿಟಿಷರ ದಬ್ಬಾಳಿಗೆಯಿಂದ ಎರಡು ಜಿಲ್ಲೆಗಳ ಬುಡಕಟ್ಟು ಜನರನ್ನು ವಿಮುಕ್ತಿಗೊಳಿಸಿದ್ದವರು ರಾಜು ; ಅವರ ಹೋರಾಟದ ಈ ಫಲವು ಕೆಲಕಾಲ ಮಾತ್ರ ನಿಂತಿತೆಂಬುದು ಬೇರೆ ವಿಷಯ. ಬಿರ್ಸಾ ಮುಂಡನಂತೆ ಅವರೂ ಮೋಸಕ್ಕೆ ಗುರಿಯಾಗಿ ಬ್ರಿಟಿಷರಿಂದ ಕೊಲ್ಲಲ್ಪಟ್ಟರು. ಆಂಧ್ರದ ಈಚಿನ ಚರಿತ್ರೆಯಲ್ಲಿ ಅವರದೇ ಐಕ್ಯ ಸಾಧಿಸಿಕೊಳ್ಳಲು ಮಹಾಶ್ವೇತಾದೇವಿ ಸಮರ್ಥರಿದ್ದಾರೆಂಬುದಕ್ಕೆ ಇದೊಂದು ನಿದರ್ಶನ. ಸಂಕಷ್ಟಕ್ಕೆ ಒಳಗಾಗಿರುವವರೆಲ್ಲ ಹೋರಾಟದಲ್ಲಿ ತೊಡಗುವುದಿಲ್ಲವೆಂಬುದು ಬೇರೆಯವರಿಗಿಂತ ಚೆನ್ನಾಗಿ ಆಕೆಗೆ ತಿಳಿದಿದೆ. ವೇದನೆ ಮತ್ತು ಹೋರಾಟಗಳ ನಡುವಣ ಸಮೀಕರಣವನ್ನು ಸರಿಯಾಗಿ ತಿಳಿಯಬೇಕಾದರೆ ಅವರ ಕಾದಂಬರಿಗಳನ್ನು ನಾವು ಓದಬೇಕು.

ಅವರ ಮೂರು ಕಾದಂಬರಿಗಳನ್ನು ಮಾತ್ರವೇ ನಾನು ಓದಿದ್ದೇನೆಂಬುದು ದುರದೃಷ್ಟಕರ. ಅವು "ಶ್ರೀಗಣೇಶ ಮಹಿಮಾ", "ಅರಣ್ಯೇರ್ ಅಧಿಕಾರ್" ಮತ್ತು "ಹಜಾರ್ ಚುರಾಸೀರ್ ಮಾ". ಜೊತೆಗೆ ಹತ್ತು ಹನ್ನೆರಡು ಸಣ್ಣಕತೆಗಳನ್ನು ಓದಿದ್ದೇನೆ. ತೆಲುಗಿನಲ್ಲಿ ಅವರ ಕೃತಿಗಳು ಲಭ್ಯವಿರುವುದು ಅವಷ್ಟೇ ಇರಬೇಕು. ಹೀಗಾಗಿ, ಅವರ ಬಗೆಗಿನ ನನ್ನ ಅಭಿಪ್ರಾಯಗಳು ಅಸಮಗ್ರ ಅಧ್ಯಯನದ ಫಲವಾಗಿದ್ದರೆ ಆಶ್ಚರ್ಯವಿಲ್ಲ.

ಮೊದಲಿಗೆ ನಾನು ಹೇಳಬೇಕಾದ್ದು ಅವರ ಕೃತಿಗಳೆಲ್ಲಾ ಒಬ್ಬ ಬದ್ಧ ಮಾರ್ಕ್ಸ್‌ವಾದಿ ಲೇಖಕರ ಬರಹಗಳೆಂಬುದನ್ನು. ಒಳ್ಳೆಯ ಸಾಹಿತಿಯಾಗಬೇಕಾದರೆ ಬದ್ಧತೆ ಇರಬಾರದು. ವಸ್ತುನಿಷ್ಠವಾಗಿರಬೇಕು ಮತ್ತು ಅಲಿಪ್ತವಾಗಿರಬೇಕು ಎಂಬುದು ಕೆಲವರ ಅಂಬೋಣ. ಒಂದು ಸಿದ್ಧಾಂತದಿಂದ ಪ್ರೇರಿತರಾಗಿದ್ದರೆ ಸಾಹಿತಿಯು ಕುರುಡಾಗಬಹುದೆಂದು ಅವರ ಆತಂಕ! ಈ "ಅಬದ್ಧತೆಯ ನಿಯಮ" ಸಾಹಿತಿಗೆ ನಮ್ಮಲ್ಲಿ ಇತ್ತೀಚೆಗಷ್ಟೇ ಅಂಟಿಕೊಂಡು ಬಂದಿರುವ ಲಕ್ಷಣ. ನಮ್ಮ ಹಿಂದಿನ ಎಲ್ಲ ಶ್ರೇಷ್ಠ ಕವಿಗಳಿಗೂ ಬದ್ಧತೆ ಇತ್ತು. ಅದು ಅವರಿಗೆ ಘಾಸಿಯನ್ನುಂಟುಮಾಡಲಿಲ್ಲ, ಸಂಕೋಚ ತರಲಿಲ್ಲ. ಆ ದೃಷ್ಟಿಯಿಂದ ಅವರು ಜೀವನವನ್ನು ವ್ಯಾಖ್ಯಾನಿಸಿದರು. ಅಂತಹ ದೊಡ್ಡವರ ಪರಂಪರೆಯನ್ನು ಮಹಾಶ್ವೇತಾದೇವಿ ಮುಂದುವರಿಸಿದ್ದಾರೆ. ಸಾಮಾಜಿಕ ಚಿಂತನೆಗಳು ಎಂದೂ ಅಲಿಪ್ತವಲ್ಲ; ಆದ್ದರಿಂದ ಅವುಗಳ ಬಗ್ಗೆ ಬರೆಯುವುದಾದರೆ ಅಲಿಪ್ತತೆ ಅಸಾಧ್ಯವೆಂದು ಆಕೆ ಬಹುಬೇಗನೆ ಮನಗಂಡರು. 1997ರಲ್ಲಿ 'ಫ್ರಂಟ್‌ಲೈನ್' ಪಾಕ್ಷಿಕಕ್ಕೆ ಸಂದರ್ಶನ ನೀಡುತ್ತಾ ಅವರೆಂದರು : "ಸಮಾಜದ ಬಡವರಿಗೆ ಹಾಗೂ ಶೋಷಿತರಿಗೆ ವಿಮುಕ್ತಿಯ ಹಾದಿಯು ಮಾರ್ಕ್ಸ್‌ವಾದದಲ್ಲಿ ಮಾತ್ರವೇ ಇದೆಯೆಂಬುದು ಇಂದಿಗೂ ನನ್ನ ದೃಢವಾದ ನಂಬಿಕೆ. ಮಾರ್ಕ್ಸ್‌ವಾದದಲ್ಲಿ ನನ್ನ ನಿಷ್ಠೆ ಅಚಲವಾದ್ದು. ಸೋವಿಯೆತ್ ಒಕ್ಕೂಟದ ಪತನವು ಆ ನಂಬಿಕೆಯನ್ನೇನೂ ಅಲುಗಾಡಿಸಿಲ್ಲ". ಮಹಾಶ್ವೇತಾದೇವಿಯವರ ಜಾಗತಿಕ ನೋಟವು ಅವರ ಹಿರಿಮೆಗೆ ಒಂದು ಕಾರಣವೆನಿಸುತ್ತದೆ. ತಾಂತ್ರಿಕ ಕೌಶಲ್ಯವೋ ಶೈಲಿಯ ಸೂಕ್ಷ್ಮತೆಯೋ ಅವರ ಶ್ರೇಷ್ಠತೆಯ ದ್ಯೋತಕವಲ್ಲ; ಹಾಗಿದ್ದಿದ್ದರೆ ಅದು ಅಸಂಬದ್ಧ ಕಾರಣವಾಗಿರುತ್ತಿತ್ತು. ನಮ್ಮ ಅರೆ-ಊಳಿಗಮಾನ್ಯ, ಅರೆ-ವಸಾಹತುಶಾಹಿ ಸಂದರ್ಭದ ಇಂದಿನ ಸ್ಥಿತಿಯಲ್ಲಿ ಆಕೆಯ ಜಾಗತಿಕ ನೋಟಕ್ಕಿಂತ ಬೇರಿನ್ನಾವುದು ಪ್ರಸ್ತುತವಾಗಿರಲು ಸಾಧ್ಯ?

ಮಹಾಶ್ವೇತಾದೇವಿ "ಶ್ರೀಗಣೇಶ ಮಹಿಮಾ" ಕುರಿತು ಹೇಳುತ್ತಾರೆ : "ಭೂಮಿ ಹಾಗೂ ಬಡಜನರ ಮೇಲೆ ಊಳಿಗಮಾನ್ಯ ಪದ್ಧತಿಯ ಕಪಿಮುಷ್ಟಿ ಎಂತಹುದೆಂದು ಬಹಿರಂಗಗೊಳಿಸುವುದೇ ಇಲ್ಲಿ ನನ್ನ ಉದ್ದೇಶ", ಕಾದಂಬರಿಯಲ್ಲಿ ಇದನ್ನು ಸಮರ್ಥವಾಗಿ ಅವರು ಮಾಡಿದ್ದಾರೆ. ಊಳಿಗಮಾನ್ಯತೆಯನ್ನು ಸಾಂಕೇತಿಕವಾಗಿ ಪ್ರತಿನಿಧಿಸುವವನು ಗಣೇಶ ಸಿಂಗ್. ಅವನೆಷ್ಟು ಭೀಕರ ಮತ್ತು ಅಸಹ್ಯ! ಅದು ಕೇವಲ ಹುಟ್ಟಿನ ಅವಗುಣವಲ್ಲ; ಅದು ಸಾಮಾಜಿಕ ಅನಿಷ್ಟದ ಅವಗುಣ. ಕಾದಂಬರಿಯಲ್ಲಿ ಪ್ರಧಾನವಾಗಿ ಮೂರು ಸಂಬಂಧಗಳನ್ನು ಎತ್ತಿ ತೋರಿಸಲಾಗಿದೆ; ಭೂಮಿ ಮತ್ತು ಜಾತಿ ವ್ಯವಸ್ಥೆಗಳ ಸಂಬಂಧ, ಭೂಮಿ - ಪ್ರಭುತ್ವಗಳ ಸಂಬಂಧ ಮತ್ತು ಭೂಮಿ ಹಾಗೂ ಮಹಿಳಾ ವಿಮೋಚನೆಯ ಸಂಬಂಧ.

ಅಸ್ಪೃಶ್ಯತೆಯೆಂಬುದು ಕೇವಲ ಹಿಂದು ಜಾತಿ ವ್ಯವಸ್ಥೆಯ ಪರಿಣಾಮವಲ್ಲವೆಂದು ಈ ಕಾದಂಬರಿ ಸಾರುತ್ತದೆ. ಕೃಷಿ ಕಾರ್ಮಿಕರನ್ನು ತನ್ನ ಅಧೀನದಲ್ಲಿರಿಸಿಕೊಳ್ಳಲು ಊಳಿಗಮಾನ್ಯ ಸಮಾಜವು ರಚಿಸಿಕೊಂಡಿರುವ ಪ್ರಬಲ ತಂತ್ರ ಅದು. ಈ ಕಾದಂಬರಿಯಲ್ಲಿ ಅಭಯ ಮಹತೋ ಒಬ್ಬ ಸಮಾಜ ಸೇವಕ. ಅವನು ಹೇಳುವಂತೆ ಅಸ್ಪೃಶ್ಯತೆ ಮತ್ತು ಭೂಮಿಯ ಪ್ರಶ್ನೆಯ ನಡುವೆ ಅವಿಭಾಜ್ಯ ಸಂಬಂಧವಿದೆ; ಭೂಮಿಯ ಸಮಸ್ಯೆ ಪರಿಹಾರವಾದಾಗ ಮಾತ್ರವೇ ಇನ್ನೊಂದಕ್ಕೂ ಪರಿಹಾರ ಸಾಧ್ಯ. ಶ್ರೇಣೀಕೃತ ಜಾತಿ ವ್ಯವಸ್ಥೆಯು ತಾನೇ ಸ್ವತಃ ಒಂದು ಶೋಷಣಾ ವ್ಯವಸ್ಥೆ, ಇಲ್ಲಿ ಕೆಳಗಿನವರಿಗಿಂತ ಮೇಲಿನವರು ಶ್ರೇಷ್ಠರು, ಮೇಲಿನವರಿಗಿಂತ ಕೆಳಗಿನವರು ಕನಿಷ್ಠರು. ಒಂದು ಸಂದರ್ಭದ ಶೋಷಕರು ಬೇರೊಂದು ಸಂದರ್ಭದಲ್ಲಿ ತಾವೇ ಶೋಷಿತರಾಗಿರಬಹುದು. ಶೋಷಕ-ಶೋಷಿತರ ನಡುವಿನ ಗೆರೆ ಎಲ್ಲೋ ಮಸುಕಾಗಿಬಿಡುತ್ತದೆ. ಅದರಿಂದಾಗಿ ಶೋಷಿತ ಜಾತಿಯವರೆಲ್ಲಾ ಒಂದಾಗುವುದು ಅಸಂಭವನೀಯವಾಗಿಬಿಟ್ಟಿತು. ಅಸ್ಪೃಶ್ಯರೆಲ್ಲಾ ಒಂದಾಗುವುದು ಕೂಡ ಸಾಧ್ಯವಾಗದೆ ಒಂದು ಜಂಟೀ ಹೋರಾಟಕ್ಕೆ ಎಡೆಯಿಲ್ಲವಾಗಿದೆ. ಅಸ್ಪೃಶ್ಯರೆನಿಸಿಕೊಂಡ ದುಸಾದರು ಮತ್ತು ಭಂಗಿಗಳು ಕಾದಂಬರಿಯಲ್ಲಿ ಬರುತ್ತಾರೆ. ಅವರ ನಡುವೆ ತೀವ್ರವಾದ ತಿಕ್ಕಾಟವಿದೆ. ಅದು ಸ್ವಲ್ಪ ಅತಿಶಯೋಕ್ತಿಯೇನೋ ಎನ್ನಿಸಿತ್ತು; ಏಕೆಂದರೆ ನಾನು ಅದನ್ನು ಓದುವಾಗ್ಗೆ ಆಂಧ್ರದಲ್ಲಿ ಪ್ರಬಲವಾದ ದಲಿತ ಚಳುವಳಿಯಿತ್ತು. ಅದರಲ್ಲಿ ಎಲ್ಲ ದಲಿತರೂ ಒಗ್ಗೂಡಿದ್ದರು ಮತ್ತು ಅದು ಇನ್ನೂ ವಿಶಾಲವಾದ ಜನಾಂದೋಲನದ ಒಂದು ಭಾಗವಾಗಿತ್ತು. ಈಗ ನೋಡಿದರೆ ಆಂಧ್ರದಲ್ಲಿ ಈ ಚಳುವಳಿಯು ವಿಶಾಲ ಜನಾಂದೋಲನವನ್ನು ಗುಮಾನಿಯಿಂದ ನೋಡುತ್ತದೆ; ಮತ್ತು ಸ್ವತಃ ತಾನು ಇಬ್ಭಾಗವಾಗಿ ಮಾಲ-ಮಾದಿಗ ಎಂಬ ಬೇರೆ ಬೇರೆ ಗುಂಪುಗಳ ಚಳುವಳಿಯಾಗಿ ಸೊರಗಿ ಹೋಗಿದೆ. ಅವರಿಬ್ಬರಿಗೂ ಶೋಷಕ ಸ್ಥಾನದಲ್ಲಿರುವವರ ಬಗೆಗಿನ ವಿರೋಧಕ್ಕಿಂತಲೂ ಅವರ ಪರಸ್ಪರ ವಿರೋಧವೇ ತೀವ್ರವಾಗಿದೆ! ಮಹಾಶ್ವೇತಾದೇವಿಯ ಸ್ಪಷ್ಟ ಒಳನೋಟ, ತಿಳುವಳಿಕೆ ಇಲ್ಲಿದೆ. ಭೂಮಿ, ಜಾತಿ ವ್ಯವಸ್ಥೆ ಮತ್ತು ಅಸ್ಪೃಶ್ಯತೆಗಳ ನಡುವಣ ಸಂಬಂಧಗಳ ಅವರ ಪರಿಜ್ಞಾನ ಅಸಾಧಾರಣವಾದುದು.

ತಾನು ಮತ್ತು ತನ್ನ ಊಳಿಗದವರು ಹಾಗೂ ಸಾಲಗಾರರ ನಡುವೆ ಆಯ್ಕೆ ಮಾಡಿಕೊಳ್ಳಬೇಕಾದರೆ ಸರ್ಕಾರವು ತನ್ನನ್ನೇ ಆಯ್ಕೆ ಮಾಡಿಕೊಳ್ಳಬೇಕೆಂದು ಗಣೇಶ ಸಿಂಗ್ ಹೂಂಕರಿಸುತ್ತಾನೆ. ಕಾಡಿನಲ್ಲಿ ಉರುವಲನ್ನು ಆರಿಸಿಕೊಳ್ಳಲು 'ಅಸ್ಪೃಶ್ಯ'ರಿಗೆ ಸರ್ಕಾರವು ಅನುಮತಿ ನೀಡಿದಾಗ ಅವನ ಆರ್ಭಟ ಹೀಗಿದೆ : ''ತನ್ನ ಬೆಂಬಲಕ್ಕೆ ಭಾರಿ ಭೂಮಾಲಿಕನಾದ ನಾನಿದ್ದೇನೋ ಅಥವಾ ಆ ನಿಕೃಷ್ಟ ಅಸ್ಪೃಶ್ಯರಿದ್ದಾರೋ ಎಂಬುದನ್ನು ಸರ್ಕಾರಕ್ಕೆ ತಿಳಿಯುವಂತೆ ಮಾಡುತ್ತೇನೆ'' ತನ್ನ ಹಣದಿಂದಲ್ಲವೇ ಆ ''ಜನರ ಪ್ರತಿನಿಧಿಗಳು'' ಚುನಾಯಿತರಾಗುವುದು, ಎಂದು ಅವರನ್ನು ಆತ ಹಂಗಿಸುತ್ತಾನೆ.

ಮಹಿಳಾ ವಿಮೋಚನೆಯೂ ಭೂಮಿಯ ಸಮಸ್ಯೆಯೊಡನೆ ತಾಳೆ ಹಾಕಿಕೊಂಡಿದೆಯೆಂದು ಮಹಾಶ್ವೇತಾದೇವಿ ಭಾವಿಸುತ್ತಾರೆ. ಆದ್ದರಿಂದ ಮಹಿಳಾ ಹೋರಾಟವು ವಿಶಾಲವೂ ಸಮಗ್ರವೂ ಆದ ಸಾಮಾಜಿಕ ಚಳುವಳಿಗಳೊಂದಿಗೆ ತನ್ನನ್ನು ತಪ್ಪದ ಗುರುತಿಸಿಕೊಳ್ಳಬೇಕೆಂದು ಅವರು ಅಭಿಪ್ರಾಯಪಡುತ್ತಾರೆ. ವಿಶಾಲ ತಳಹದಿಯ ಸಾಮಾಜಿಕ ಚಳುವಳಿಗಳು ಚಿಕ್ಕಚಿಕ್ಕ ಪ್ರತ್ಯೇಕ ಚಳುವಳಿಗಳಾಗಿ ವಿಘಟನೆ ಹೊಂದುತ್ತಿರುವ ಇಂದಿನ ಸಂದರ್ಭದಲ್ಲಿ ಅವರ ಸೂಚನೆ ಬಹಳ ಉಪಯುಕ್ತವಾಗಿದೆ. ''ಸ್ವಾಭಾವಿಕ'' ಅಥವಾ ಸಂವೈಧಾನಿಕ ಪರಿವರ್ತನೆಯಲ್ಲಿ ಮಹಾಶ್ವೇತಾದೇವಿಗೆ ನಂಬಿಕೆ ಇದ್ದಂತೆ ತೋರುವುದಿಲ್ಲ. ಹಾಗೆ ನಮ್ಮ ಇಂದಿನ ಸಮಾಜವು ಕಲ್ಯಾಣಕರ ಸಮಾಜವಾಗಿ ಬದಲಾದೀತೆ! ಇದೊಂದು ಭ್ರಮೆ. ಅವರೆನ್ನುತ್ತಾರೆ : ''ಸಂವಿಧಾನ, ನ್ಯಾಯಾಂಗ, ಮಂತ್ರಿಗಳು, ಕಾರ್ಯಾಂಗ, ಇವೆಲ್ಲಾ ಸಾಮಾಜಿಕ ಬದಲಾವಣೆ ತರಬಹುದೆಂದು ನಿರೀಕ್ಷಿಸುವುದೇ ಒಂದು ಮೋಜು'' ಅದಕ್ಕೆ ನಿಜಕ್ಕೂ ಬೇಕಾದ್ದು ವಿಶಾಲವಾದ ಪ್ರಬಲ ಜನತಾ ಹೋರಾಟ.

''ಅರಣ್ಯೇರ್ ಅಧಿಕಾರ್''ನಲ್ಲಿ ಸಾಮಾಜಿಕ ಬದಲಾವಣೆಯ ಸಾಧನೆಗಳತ್ತ ಇನ್ನೂ ಹೆಚ್ಚಿನ ಪ್ರಖರ ದೃಷ್ಟಿಯನ್ನು ಹರಿಸಲಾಗಿದೆ. ಬಿರ್ಸಾ ಮೊದಲಿಗೆ ಒಬ್ಬ ಅನಕ್ಷರಸ್ಥ ಬುಡಕಟ್ಟಿನ ಯುವಕ; ಕ್ರಮೇಣ ಅವನೊಬ್ಬ ಕ್ರಾಂತಿಕಾರಿ ದೇವತೆಯಾಗಿ ವಿಕಾಸ ಹೊಂದುತ್ತಾನೆ. ಆ ಜನಾಂಗದ ಮನಸ್ಸಿನ ಆಳವನ್ನು ಹೊಕ್ಕು ಮಹಾಶ್ವೇತಾದೇವಿ ಅನೇಕ ಮಾರ್ಮಿಕ ಒಳನೋಟಗಳನ್ನು ನೀಡಿರುವುದು ಅವರ ವೈಶಿಷ್ಟ್ಯ. ತನ್ನ ಸುಖವು ಇಡೀ ಮುಂಡಾರಿ ಸಂಕುಲದ ಒಳಿತಿನಲ್ಲಿ ಏಕೀಭವಿಸಿದೆಯೆಂದು ಬಿರ್ಸಾ ಅರಿತುಕೊಳ್ಳುತ್ತಾನೆ. ತಾನು ಕ್ರೈಸ್ತಧರ್ಮವನ್ನು ಸೇರುವುದರಿಂದ ಅಥವಾ ಬ್ರಾಹ್ಮಣ್ಯದ ಕೆಲವು ಕರ್ಮಗಳಿಗೆ ಗಂಟುಬೀಳುವುದರಿಂದ ಅಥವಾ ಬಿರ್ಸಾ ಮುಂಡ ಹೋಗಿ ಬಿರ್ಸಾ ದಾವೂದ್ ಆಗುವುದರಿಂದ ತನಗೆ ಪರಿಹಾರವಿಲ್ಲ; ಆದ್ದರಿಂದಲೇ ಅಜ್ಞಾನ ಮತ್ತು ಮೌಢ್ಯತೆಗಳನ್ನು ಸ್ವಜನರಾದ ಮುಂಡಾರಿಗಳಲ್ಲಿ ಹಿಮ್ಮೆಟ್ಟಿಸಿ ಅವರನ್ನು ''ಉಲ್ಗೂಲನ್'' ಎಂಬ ಸಶಸ್ತ್ರ ದಂಗೆಗೆ ಅಣಿಗೊಳಿಸುತ್ತಾನೆ ಬಿರ್ಸಾ. ಅವರ ಹೋರಾಟದ ಘೋಷಣೆಯಾದರೂ ಏನು?

''ಕಾಡಿನಲ್ಲಿ ಯಾರ ಅಧಿಕಾರಕ್ಕೆ ಮಾನ್ಯತೆ? ಅಲ್ಲಿಯ ಮೂಲದ ಬುಡಕಟ್ಟಿನವರದೋ ಅಥವಾ ಒಳಗೆ ನುಸುಳಿರುವವರದೋ?'' ದಂಗೆಯನ್ನು ಬ್ರಿಟಿಷ್ ಸರ್ಕಾರ ನಿರ್ದಯವಾಗಿ ಅಡಗಿಸಿ,

ಕುತಂತ್ರದಿಂದ ಬಿರ್ಸಾನನ್ನು ಸೆರೆಹಿಡಿಯಿತು. ಆಮೇಲೆ ಅವನನ್ನು ರಾಂಚಿ ಸೆರೆಮನೆಯಲ್ಲಿ ವಿಷ ಹಾಕಿ ಸಾಯಿಸಲಾಯಿತು. ಅವನ ಮರಣವು ಬುಡಕಟ್ಟು ಜನಾಂಗದ ಬೇರೆ ಅನೇಕ ದಂಗೆಗಳಿಗೆ ಜನ್ಮ ನೀಡಿತು; ಇಂದಿಗೂ ನಮ್ಮ ದೇಶದ ವಿವಿಧ ಭಾಗಗಳಲ್ಲಿ ಅವು ಜರುಗುತ್ತಲೇ ಇವೆ. ಒಂದು ಶತಮಾನದ ಹಿಂದೆ ಬಿರ್ಸಾ ಹಾಕಿದ ಪ್ರಶ್ನೆಯನ್ನೇ ಇಂದಿಗೂ ಬುಡಕಟ್ಟು ಜನಾಂಗಗಳ ಚಳುವಳಿಗಳು ಹಾಕುತ್ತಲೇ ಇವೆ. ಮಹಾಶ್ವೇತಾದೇವಿ ಹೇಳುವಂತೆ, ''ನಾಯಕನ ಸಾವಿನಿಂದ ಜೀವನ ಹಾಗೂ ಕ್ರಾಂತಿಗಳ ಪ್ರಗತಿ ನಿಂತುಹೋಗುವುದಿಲ್ಲ''.

''ಅರಣ್ಯೇರ್ ಅಧಿಕಾರ್'' ಕಾದಂಬರಿಯ ವಾದವನ್ನು ''ಹಜಾರ್ ಚುರಾಸೀರ್ ಮಾ'' ಇನ್ನೂ ಮುಂದಕ್ಕೆ ಬೆಳೆಸುತ್ತದೆ. ವಿಶಾಲವಾದ ಸೈದ್ಧಾಂತಿಕ ಹೋರಾಟಕ್ಕೆ ಅದು ಬುನಾದಿಯನ್ನು ಕಲ್ಪಿಸುತ್ತದೆ. ಈ ಕಾದಂಬರಿಯಲ್ಲಿ ವ್ರತಿಯ ಪ್ರತಿಭಟನೆಯು ಬಿರ್ಸಾನ ದಂಗೆಯಂತಲ್ಲ; ಅದಕ್ಕೊಂದು ಸಾಮಾಜಿಕ ಆರ್ಥಿಕ ಆಧಾರವಿದೆ. ಬಿರ್ಸಾ ಮತ್ತು ವ್ರತಿಗಳ ನಡುವೆ ಎಪ್ಪತ್ತು ವರ್ಷಗಳ ಅಂತರವಿದೆ. ಆ ಅಂತರದಲ್ಲಿ ನಮ್ಮ ದೇಶದಲ್ಲಿ ಹಲವಾರು ಬದಲಾವಣೆಗಳಾದುವು. ಆದರೆ ಅತಿಸಾಮಾನ್ಯನ ಗೋಳು ಮಾತ್ರ ಇಮ್ಮಡಿ, ನೂರ್ಮಡಿಯಾಗಿ ಬೆಳೆದಿದೆ. ಉದಾರವಾದಿ ಬುದ್ಧಿಜೀವಿಗಳ ಸುಧಾರಣಾ ತಂತ್ರಗಳಿಂದ ಗಮನಾರ್ಹವಾದ ಯಾವ ಬದಲಾವಣೆಯೂ ಉಂಟಾಗಲಿಲ್ಲ. ರಾಜಕೀಯ ಮತ್ತು ಅಧಿಕಾರಶಾಹಿಯ ಭ್ರಷ್ಟತೆ ಆಮೂಲಾಗ್ರವಾಗಿ ಹರಡಿತು. ಊಳಿಗಮಾನ್ಯ ಮತ್ತು ಬಂಡವಾಳಶಾಹಿಗಳ ಕರಾಳ ಶೋಷಣೆಗೆ ಪ್ರಭುತ್ವವು ನೇರ ಬೆಂಬಲ ನೀಡಿ ಅವುಗಳ ರಕ್ಷಣೆಗೆ ನಿಂತಿದೆ. ಪ್ರಜಾಪ್ರಭುತ್ವವೆಂಬುದು ಶೀಘ್ರಗತಿಯಲ್ಲಿ ಒಂದು ಪ್ರಹಸನವಾಗಿ ಮೂಡಿಬಂದಿದೆ. ಹಿಂದೆಂದೂ ಇಲ್ಲದಷ್ಟು ಹತಾಶೆ ಯುವಕರನ್ನು ಆವರಿಸಿದೆ; ತಮ್ಮ ಜೀವವನ್ನು ಲೆಕ್ಕಿಸದೆ ಅವರಲ್ಲನೇಕರು ರೈತಾಪಿ ಜನರ ಹಾಗೂ ಬುಡಕಟ್ಟು ಜನಾಂಗಗಳ ಹೋರಾಟಗಳಿಗೆ ಧುಮುಕಿದ್ದಾರೆ. ಅವರು ಬಂದದ್ದಾದರೂ ಎಲ್ಲಿಂದ ? ವಿಶ್ವವಿದ್ಯಾನಿಲಯಗಳು, ಸಂಶೋಧನಾ ಸಂಸ್ಥೆಗಳು, ವೈದ್ಯಕೀಯ ಹಾಗೂ ತಾಂತ್ರಿಕ ಶಿಕ್ಷಣ ನೀಡುವ ಮಹಾವಿದ್ಯಾಲಯಗಳು, ಮತ್ತು ಹಾಯಾಗಿರುವ ಮನೆಗಳನ್ನು ತೊರೆದುಬಂದವರು ಅವರು. ಪ್ರಭುತ್ವದ ಹಿಂಸೆಗೆ ಒಂದು ಹೊಸ ಆಯಾಮ ದೊರಕಿದಂತಾಗಿ ಅದಕ್ಕೆ ಲಕ್ಷೋಪಲಕ್ಷ ಕೈಗಳ ದೈತ್ಯಶಕ್ತಿ ತುಂಬಿಬಂದಿದೆ. ಅದರಿಂದ ಪ್ರಭುತ್ವವು ಅತ್ಯಂತ ದಮನಕಾರಿ ಭಯೋತ್ಪಾದಕನಾಗಿ ಮೆರೆಯುತ್ತಿದೆ. ಸರ್ವೇಸಾಮಾನ್ಯ ಅಪರಾಧಿ ಮತ್ತು ಕ್ರಾಂತಿಕಾರಿಯೊಬ್ಬನ ನಡುವೆ ಪ್ರಭುತ್ವದ ದೃಷ್ಟಿಯಲ್ಲಿ ಯಾವ ಅಂತರವೂ ಇಲ್ಲ! ಪ್ರಭುತ್ವದ ಪರವಾದ ಫಿರ್ಯಾದಿಯು ತಾನೇ ನ್ಯಾಯಾಧೀಶನೂ ಆಗಿದ್ದಾನೆ, ಗಲ್ಲಿಗೇರಿಸುವವನೂ ಆಗಿದ್ದಾನೆ!!

ವ್ರತಿಯ ತಾಯಿ ಸುಜಾತಳ ದೃಷ್ಟಿಯಿಂದ ಈ ಎಲ್ಲ ಆತಂಕಕಾರಿ ಬೆಳವಣಿಗೆಗಳನ್ನು ''ಹಜಾರ್ ಚುರಾಸೀರ್ ಮಾ'' ಚಿತ್ರಿಸುತ್ತದೆ. ಒಂದೇ ಒಂದು ದಿನದಲ್ಲಿ ಅವಳಿಗೆ ಮಹತ್ತರ ಜ್ಞಾನ ಉದಯಿಸುತ್ತದೆ. ಯುವಕರ ಒಂದು ಇಡೀ ಪೀಳಿಗೆಯು ಎಲ್ಲವನ್ನೂ ತ್ಯಾಗ ಮಾಡಿ ಹೋರಾಟದ ಚಳುವಳಿಗೇಕೆ ಧುಮುಕುತ್ತಿದೆ ಮತ್ತು ಪ್ರಭುತ್ವವು ಅವರನ್ನೂ ಅವರ ಕನಸನ್ನೂ ಒಂದೇ ಏಟಿಗೆ ಹೇಗೆ ಧ್ವಂಸಗೊಳಿಸುತ್ತಿದೆ, ಎಂಬುದರ ಪರಿವೆ ಅದು. ಸುಜಾತಾ ಮತ್ತು ವ್ರತಿ, ಇವರಿಬ್ಬರ ಪಾತ್ರಗಳೂ ನಮ್ಮನ್ನು ತೀವ್ರವಾಗಿ ಕಾಡುತ್ತವೆ, ನಾವು ಎದುರಿಸಲು ಹಿಂಜರಿಯುತ್ತಿದ್ದ ಪ್ರಶ್ನೆಗಳನ್ನು ಭೂತಾಕಾರವಾಗಿ ನಮ್ಮ ಮುಂದಿಡುತ್ತವೆ.

ಮಹಾಶ್ವೇತಾದೇವಿಯವರ ಬೇರೆ ಯಾವುದೇ ಕಾದಂಬರಿಗಿಂತಲೂ ಹೆಚ್ಚಾಗಿ ಇದು ನನ್ನನ್ನು ವಿಚಲಿತಗೊಳಿಸಿದೆ; ಏಕೆಂದರೆ, ಅನೇಕ ಸುಜಾತರನ್ನೂ ವ್ರತಿಗಳನ್ನೂ ಎಳೆಯದರಲ್ಲೇ ಹೊಸಕಿ ಹಾಕಿರುವುದನ್ನು ಸ್ವತಃ ನಾನೇ ನೋಡಿ ಸ್ತಂಭೀಭೂತನಾಗಿದ್ದೇನೆ.

ಕೆಲವು ಸೌಂದರ್ಯೋಪಾಸಕ ಸಾಹಿತ್ಯಾಭ್ಯಾಸಿಗಳಿದ್ದಾರೆ. ಅವರ ನವಿರು ಪ್ರಜ್ಞೆಗೆ ಮಹಾಶ್ವೇತಾದೇವಿಯವರ ಕಾದಂಬರಿಗಳು ಉಲ್ಲಾಸ ತರುವುದಿಲ್ಲವೆಂದು ಅವರಿಗೆ ಅಸಮಾಧಾನ. ಅವರ ಇಂಗಿತವನ್ನು ನಾನು ಒಪ್ಪುತ್ತೇನಾದರೂ ಅವರಿಗೆ ಹೇಳಬೇಕಾದ ಸಂಗತಿಯೊಂದಿದೆ : ಸತ್ಯವನ್ನು ಶೋಧಿಸುವ ಮಹಾನ್ ಸಾಹಿತ್ಯಕೃತಿ ಯಾವುದೂ ಆಪ್ಯಾಯಮಾನವಾಗಿರುವುದಿಲ್ಲ. ಅದು ನಮ್ಮನ್ನು ವಿಚಲಿತಗೊಳಿಸುತ್ತದೆ, ಚುಚ್ಚುತ್ತದೆ ಮತ್ತು ಕ್ಷುರಹರಿತವಾದ ಪ್ರಶ್ನೆಗಳನ್ನು ನಮ್ಮ ಮನೋಹರ ಮನಸ್ಸುಗಳ ಮುಂದೆ ಪ್ರಖರವಾಗಿ ನಿಲ್ಲಿಸುತ್ತದೆ. ಇನ್ನು ಕೆಲವು ವಿಲಾಸಿ ಓದುಗರ ಆಕ್ಷೇಪವೇ ಬೇರೆ. ಅವರ ಪ್ರಕಾರ ಮಹಾಶ್ವೇತಾದೇವಿ ಸಾಕಷ್ಟು ''ಆಧುನಿಕ ಮತ್ತು ಬೌದ್ಧಿಕ''ವಲ್ಲದ ಸಾಹಿತಿ. ಅಂದರೆ, ಆಕೆ ವೈಯುಕ್ತಿಕ ಅನನ್ಯತೆಯ ಹುಡುಕಾಟವನ್ನು ಕುರಿತು ಬರೆಯುವುದಿಲ್ಲವೆಂದೋ, ಆಧುನಿಕ ಮಾನವನ ಅಸ್ತಿತ್ವದ ಬಿಕ್ಕಟ್ಟನ್ನು ಕುರಿತು ಬರೆಯುವುದಿಲ್ಲವೆಂದೋ, ಅಥವಾ ಅಂಥದೇ ಇನ್ನೇನನ್ನಾದರೂ ಚಿತ್ರಿಸುವುದಿಲ್ಲವೆಂದೋ ಅವರ ಆಕ್ಷೇಪ. ನನಗೆ ಗೋಚರಿಸುವಂತೆ ಮಹಾಶ್ವೇತಾದೇವಿಗೆ ವೈಯುಕ್ತಿಕ ಹುಡುಕಾಟವು ಸಮಾಜದೊಂದಿಗೆ ವ್ಯಕ್ತಿಯ ಸಂಬಂಧವನ್ನು ಕಂಡುಕೊಳ್ಳುವುದರೊಂದಿಗೆ ಮುಕ್ತಾಯವಾಗುತ್ತದೆ. ಈ ಪ್ರಪಂಚವು ''ಅಸಂಗತವಾಗಿ ತೋರುವುದು'' ಎಲ್ಲಿಯವರೆಗೆಂದರೆ ವ್ಯಕ್ತಿಯು ತನ್ನ ಜೀವನದ ಅರ್ಥವನ್ನು ಸೃಷ್ಟಿಸಿಕೊಳ್ಳುವವರೆಗೆ ಮಾತ್ರ. ತನ್ನ ಕ್ರಿಯೆ ಮತ್ತು ಬದ್ಧತೆಗಳು ಆ ಅರ್ಥವನ್ನು ತಾವಾಗೇ ಸೃಷ್ಟಿಸಿಕೊಡುತ್ತವೆ.

ಅದೃಷ್ಟವೋ ದುರಾದೃಷ್ಟವೋ, ಅಂತೂ ಆಂಧ್ರದಲ್ಲಿ ಹೇರಳವಾಗಿ ಗಣೇಶ ಸಿಂಗ್‌ಗಳಿದ್ದಾರೆ, ಬಿರ್ಸಾ ಮುಂಡರಿದ್ದಾರೆ, ವ್ರತಿಗಳಿದ್ದಾರೆ, ಸುಜಾತೆಯರಿದ್ದಾರೆ. ಹಿರಿಯ ಮತ್ತು ಕಿರಿಯ ಸಾಹಿತಿಗಳನೇಕರು ಈ ಅದ್ಭುತ ಸಂಗತಿಯನ್ನು ಅರ್ಥಮಾಡಿಕೊಳ್ಳಲು ಹೆಣಗುತ್ತಿದ್ದಾರೆ, ಅದನ್ನು ಪ್ರತಿಫಲಿಸಲು ಯತ್ನಿಸುತ್ತಿದ್ದಾರೆ. ಮಹಾಶ್ವೇತಾದೇವಿ ಯವರಿಗೆ ಅವರು ಹಿರಿಯರಿರಬಹುದು, ಕಿರಿಯರಿರಬಹುದು; ಆದರೆ ಅವರೆಲ್ಲಾ ಆಕೆಯ ಬಗ್ಗೆ ಗೌರವ ತಳೆಯುತ್ತಾರೆ. ಏಕೆಂದರೆ, ತಮ್ಮ ಸಾಹಿತ್ಯ ರಚನೆಯಂತೆ ಆಕೆಯದೂ ಬಹಳ ಪ್ರಗಲ್ಭ ಧೈರ್ಯದ ಕ್ರಿಯೆ ಎಂಬುದು ಅವರಿಗೆ ಮನಮುಟ್ಟಿದೆ.

ನಮ್ಮ ದೇಶದ ಒಬ್ಬ ಧೈರ್ಯವಂತ, ಕ್ರಿಯಾವಂತ, ಉನ್ನತಮಟ್ಟದ ಲೇಖಕಿ ಮಹಾಶ್ವೇತಾದೇವಿ. ಅವರಿಗೆ ನನ್ನ ಪ್ರಣಾಮಗಳು.

- ವಲ್ಲಂಪಾಟಿ ವೆಂಕಟಸುಬ್ಬಯ್ಯ

*(ಅನುವಾದ : ಜಿ.ಆರ್.)*

---

## ಅಡುಗೆ-ಉಡುಗೆ-ಒತ್ತಡವಿಲ್ಲದ ಮಹಿಳೆ

- ಶಾಂತಾ ನಾಗರಾಜ್

ಆಕೆ ನಲವತ್ತೈದರ ಪ್ರೌಢೆ, ಭಾರತೀಯ ಗೆಳತಿಯ ಮನೆಗೆ ಆಹ್ವಾನಿತಳಾಗಿ ಬಂದವಳು ಅವರ ಅಡುಗೆ ಮನೆ ನೋಡಿ ಚಕಿತಳಾಗುತ್ತಾಳೆ ''ಯಾಕೆ ಇಷ್ಟೊಂದು ಸಾಮಾನುಗಳು?'' ಭಾರತೀಯಳಿಗೋ ಇರಸು ಮುರಸು 'ಅಲ್ಲ ನಾನು ಎಷ್ಟು ಕಡಿಮೆ ವಸ್ತುಗಳನ್ನಿಟ್ಟುಕೊಂಡು ಸಂಸಾರ ಮಾಡುತ್ತಿದ್ದೇನೆ ಈಕೆ ನೋಡಿದರೆ ಹೀಗೆ ಹೇಳುತ್ತಾಳಲ್ಲ' ಎಂದು. ಹೇಳುತ್ತಾಳೆ ''ನೀವು ನಮ್ಮ ಭಾರತದ ಅಡುಗೆ ಮನೆ ನೋಡಬೇಕು, ಅದಕ್ಕೆ ಹೋಲಿಸಿದರೆ ನನ್ನ ಹತ್ತಿರ ಅದರ ಕಾಲುಭಾಗವೂ ಇಲ್ಲ'' ಅತಿಥಿಯ ಮತ್ತೊಂದು ಪ್ರಶ್ನೆ ''ಯಾಕೆ ನೀವು ಭಾರತೀಯರು ಇಷ್ಟೊಂದು ಅಡಿಗೆ ಸಾಮಾನುಗಳ ಪಾತ್ರೆ ಪಡಗಗಳನ್ನು ಶೇಖರಿಸುತ್ತೀರಿ?'' ಭಾರತೀಯಳಿಗೀಗ ಕಕ್ಕಾಬಿಕ್ಕಿ ''ಅಯ್ಯೋ ಪ್ರತಿದಿನ ತಿಂಡಿ ಅಡುಗೆ ಎಲ್ಲ ಮಾಡಲು ಇವೆಲ್ಲ ಬೇಕೇ ಬೇಕಲ್ಲ'' ಅತಿಥಿ ಈಗ ಬೆಚ್ಚಿ ಕೇಳುತ್ತಾಳೆ ''ಏನು ನೀವು ದಿನಾ ಮನೆಯಲ್ಲೇ ತಿಂಡಿ ಅಡುಗೆ ಮಾಡುತ್ತೀರಾ'' ಮುಂದುವರೆದು ಹೇಳುತ್ತಾಳೆ ''ನಾನಂತೂ ನನ್ನ ಇಡೀ ಜೀವಮಾನದಲ್ಲೇ ಎರಡೇ ದಿನ ಅಡಿಗೆ ಮಾಡಿದ್ದು ಒಂದು ನಮ್ಮ ಮದುವೆಯಾದ ನಂತರ ಬಂದ ನನ್ನ ಗಂಡನ ಹುಟ್ಟಿದ ಹಬ್ಬದ ದಿನ, ಎರಡು ನಮ್ಮ ಮೊದಲ ವೆಡ್ಡಿಂಗ್ ಆನ್ಯುವರ್ಸರಿಯಂದು'' ಅಲ್ಲೇ ಇದ್ದ ಆಕೆಯ ಗಂಡ ಮೆಲ್ಲಗೆ ಉಸುರುತ್ತಾನೆ ''ಹೂಂ ಅವೆರಡೂ ನನ್ನ ಬದುಕಿನ ಅತ್ಯಂತ ಕೆಟ್ಟ ದಿನ''.

ಇದೇನೂ ನಗೆಹನಿಯಲ್ಲ. ಚೀನಾ ಮತ್ತು ಸಿಂಗಪುರದ ಮಹಿಳೆಯರು ನೂರಕ್ಕೆ ಎಂಭತ್ತು ಜನ ಅಡುಗೆ ಮಾಡುವುದಿಲ್ಲ. ನಮ್ಮ ದೇಶದ ಮಹಿಳೆಯರ ಅರ್ಧ ಆಯುಷ್ಯ ಅಡಿಗೆ ಮನೆ ಮತ್ತು ಅದರ ಒತ್ತಡಗಳಲ್ಲಿ ಕಳೆದು ಹೋಗುವಾಗ ''ಯಾರು ಮಾಡಿದರು ಹೆಣ್ಣಿಗೆ ಈ ಬಂಧನ'' ಎಂದು ಬೇಸರಿಸುತ್ತೇವಲ್ಲ, ಅಂಥ ಬಂಧನಗಳನ್ನು ಈ ಮಹಿಳೆಯರು ಕಳಚಿಕೊಂಡುಬಿಟ್ಟಿದ್ದಾರೆ. ಸಿಂಗಪುರದಲ್ಲಿ ನೂರಕ್ಕೆ ಎಪ್ಪತ್ತೈದು ಮಹಿಳೆಯರು ಉದ್ಯೋಗಸ್ಥ ರಾಗಿರುತ್ತಾರೆ. ಆದರೆ ಈ ಅಡುಗೆ ಮಾಡದಿರುವಿಕೆ ಕೇವಲ ಉದ್ಯೋಗಸ್ಥ ಮಹಿಳೆಯರಿಗೆ ಮಾತ್ರ ಒದಗಿ ಬಂದ ಸೌಲಭ್ಯವೇನಲ್ಲ. ಗೃಹಿಣಿಯರೂ ಅಡಿಗೆ ಮಾಡುವುದಿಲ್ಲ. ಹಾಗಿದ್ದರೆ ಇವರ ಆಹಾರವೆನ್ನುವ ಮುಖ್ಯ ಅಗತ್ಯ ಹೇಗೆ ಪೂರೈಕೆಯಾಗುತ್ತದೆ ಎನ್ನುವ ಪ್ರಶ್ನೆ ಹುಟ್ಟುತ್ತದೆಯಲ್ಲವೆ?

ಸಿಂಗಪುರದಲ್ಲಿ ಹತ್ತು ಹೆಜ್ಜೆಗೊಂದು 'ಹಾಕರ್ ಸೆಂಟರ್' ಗಳಿರುತ್ತವೆ. ಚೀನಾ ಭಾಷೆಯಲ್ಲಿ ಇವನ್ನು 'ತಿನ್ನುವ ಮನೆ' ಎಂದು ಕರೆಯುತ್ತಾರೆ ಅವುಗಳ ಫಲಕಗಳೂ ಅದೇ ಅರ್ಥ ಹೊಂದಿವೆ. 'ಲೀ ಚಾಂಗ್ ಈಟಿಂಗ್ ಹೌಸ್', 'ಈಸೂನ್ ಈಟಿಂಗ್ ಹೌಸ್' ಇಂಥಾ ಬೋರ್ಡುಗಳು ಸಿಂಗಪುರದ ತುಂಬಾ ರಾರಾಜಿಸುತ್ತಿರುತ್ತವೆ. ಇವು ದಿನದ ಹದಿನಾರು ಗಂಟೆಗಳ ಕಾಲ ತೆರೆದಿರುತ್ತವೆ. ಅತ್ಯಂತ ಶುಭ್ರವಾದ ಹಾಗೂ ವೈವಿಧ್ಯಗಳಿಂದ ಕೂಡಿದ ಮತ್ತು ತಾಜಾತನದಿಂದ ಲಭ್ಯವಾಗುವ ತಿನಿಸುಗಳು ಗ್ರಾಹಕರನ್ನು ಆಕರ್ಷಿಸುತ್ತವೆ. ಸಿಂಗಪುರಿಯನ್ನರು ಮನುಷ್ಯರನ್ನು ಹೊರತುಪಡಿಸಿ, ನೆಲದ ಮೇಲೆ, ನೀರಿನಲ್ಲಿ, ಆಕಾಶದಲ್ಲಿ ಚಲಿಸುವುದನ್ನೆಲ್ಲಾ ತಿಂದುಬಿಡುತ್ತಾರೆ. ಹಾಕರ್ ಸೆಂಟರ್‌ಗಳ ಮುಂದೆ ಇರುವ ಮೆನು ಬೋರ್ಡ್ ಓದಿದರೆ ಆಕ್ಟೋಪಸ್ ಸೂಪ್, ಸೀಹಾರ್ಸ್ ಸೂಪ್, ಡಕ್‌ನ್ಯೂಡಲ್ಸ್ ಅವುಗಳ ಸ್ವಾರಸ್ಯ ತಿಳಿಯುತ್ತದೆ. ಇತ್ಯಾದಿ ಜಲಚರ ಹಾಗೂ ಭೂಮಿಚರ ಪ್ರಾಣಿಗಳ ಸಂತೆಯೇ ಅವರ ಅಡುಗೆಗಳಲ್ಲಿ ಸಾಲಿಟ್ಟುಬಿಟ್ಟಿರುತ್ತದೆ. ಇಷ್ಟೊಂದು ವೈವಿಧ್ಯಗಳಲ್ಲಿ ದೊರೆಯುವ ತಿನಿಸುಗಳನ್ನು ಮನೆಯಲ್ಲಿ ತಯಾರಿಸುವುದು ವೆಚ್ಚದ ದೃಷ್ಟಿಯಿಂದ ದುಬಾರಿ, ಶ್ರಮದ ದೃಷ್ಟಿಯಿಂದ ಕಷ್ಟದ ರೇಜಿಗೆ. ಈ ಎರಡೂ ಕಾರಣಕ್ಕೆ ಸಿಂಗಪುರದ ಮಹಿಳೆ ಜಾಣತನದಿಂದ ತನ್ನ ಅಡುಗೆ ಮನೆಗೆ ಬೆನ್ನು ಹಾಕಿ ಹಾಕರ್ ಸೆಂಟರ್‌ಗಳತ್ತ ಧಾವುಗಾಲಿಕ್ಕುತ್ತಾಳೆ. ಇದಕ್ಕೆ ಸರ್ಕಾರದ ಸಹಕಾರವೂ ಉಂಟು. ಅಲ್ಲಲ್ಲಿ ಹಾಕರ್ ಸೆಂಟರ್‌ಗಳನ್ನು ಸ್ಥಾಪಿಸಲು ಅನುಮತಿ ನೀಡುವುದರಲ್ಲಿ, ಅವುಗಳ ನೈರ್ಮಲ್ಯದ ಬಗ್ಗೆ ಕಾಳಜಿ ವಹಿಸುವಲ್ಲಿ, ಅಲ್ಲಿಯ ಬೆಲೆಗಳ ಮಟ್ಟ ಏರದಂತೆ ತಡೆಯುವಲ್ಲಿ ಸರ್ಕಾರ ತನ್ನ ಪಾತ್ರವನ್ನು ಯಶಸ್ವಿಯಾಗಿ ನಿರ್ವಹಿಸುತ್ತದೆ.

''ಹೆಣ್ಣು ಎಂದರೆ ಹೀಗಿರಬೇಕು ಹಣೆಯಲ್ಲಿ ಕುಂಕುಮ ಧರಿಸಿರಬೇಕು, ಮುಡಿಯಲ್ಲಿ ಹೂವು ನಗುತಿರಬೇಕು ಕೈ ತುಂಬಾ ಬಳೆಯ ತೊಟ್ಟಿರಬೇಕು'' ಎನ್ನುವ ಹಳೆಯ ಚಿತ್ರಗೀತೆಯೊಂದು ನಮ್ಮ ಭಾರತೀಯ ಮಹಿಳೆಯ ಚಿತ್ರಣವನ್ನು 'ಬೇಕು' ಎನ್ನುವ ಒತ್ತಾಯದೊಂದಿಗೇ ಬಿಂಬಿಸುತ್ತದೆ. ಇಂಥ ಉಡುಗೆ- ತೊಡುಗೆಗಳಿಂದ ತಮ್ಮ ಸೌಂದರ್ಯವನ್ನು ದೃಢೀಕರಿಸಿಕೊಳ್ಳುವ ನಂಬಿಕೆ ನಮ್ಮ ಮಹಿಳೆಯರಲ್ಲಿ ಶತಶತಮಾನಗಳಿಂದ ನಡೆದು ಬಂದಿದೆ ಇವುಗಳ ಆಧಾರದ ಮೇಲೆಯೇ ರೇಶ್ಮೆ ಮತ್ತು ಇತರ ಬಟ್ಟೆಗಳ ತಯಾರಿಕೆ, ಕುಂಕುಮ ಮತ್ತು ಇತರ ವಸ್ತುಗಳ ತಯಾರಿಕೆ, ಬಳೆ ಮುಂತಾದ ಗೃಹಕೈಗಾರಿಕೆ, ಇತ್ಯಾದಿಗಳು ಹೆಮ್ಮರವಾಗಿ ಬೆಳೆದು ವಾಣಿಜ್ಯ ವ್ಯವಹಾರದ ಮುಖ್ಯ ವಾಹಿನಿಯಲ್ಲಿ ಸೇರಿಹೋಗಿದೆ. ಇವುಗಳಿಗೆ ಮುಖ್ಯ ಗ್ರಾಹಕಳು ಮಹಿಳೆಯೇ ಎನ್ನುವುದು ನಮ್ಮ ಭಾರತೀಯ ಮಹಿಳೆಯ ಪ್ರಜ್ಞೆಗೆ ನಿಲುಕುವುದೇ ಇಲ್ಲ.

ಈಗ ಹೀಗೊಂದು ಮಹಿಳಾ ಸಮುದಾಯವನ್ನು ಕಲ್ಪಿಸಿಕೊಳ್ಳೋಣ ನಮಗೆ ಬಟ್ಟೆಗಳ ಬಣ್ಣಗಳು, ಪ್ರಿಂಟ್‌ಗಳ ಬಗ್ಗೆ ಪರಿವೆಯಿಲ್ಲ. ಮೈಮುಚ್ಚಲು ಯಾವುದೋ ಒಂದು ಸರಳ ಬಣ್ಣದ ಉಡುಗೆ ತೊಟ್ಟರಾಯಿತು. ನಾವು ಕುಂಕುಮ, ಬಳೆಗಳಿಂದ ಹೂಗಳಿಂದ ನಮ್ಮ ಸೌಂದರ್ಯವನ್ನೇನೂ ಅಭಿವೃದ್ಧಿ ಪಡಿಸಿಕೊಳ್ಳಬೇಕಿಲ್ಲ ನಾವು ಅದನ್ನೆಲ್ಲ ತ್ಯಜಿಸಿಬಿಡುತ್ತೇವೆ. ಗಂಡಸರ ಹಾಗೆ ಮೈತುಂಬ ಬಟ್ಟೆ ಧರಿಸಿ ಓಡಾಡಿದರಾಯಿತು ಎಂದಾಗ ನಮ್ಮ ಒಟ್ಟು ಸಂಸ್ಕೃತಿ ದಿಕ್ಕೆಟ್ಟು ನೋಡುವುದಲ್ಲವೇ? ಸಿಂಗಪುರದ ಮಹಿಳೆಯರು ಇದನ್ನು ಸಾಧಿಸಿಯೇ ಬಿಟ್ಟಿದ್ದಾರೆ. ಅವರು ಉಡುಗೆಗೆ-ತೊಡುಗೆಗೆ ಮಹತ್ವವನ್ನೇ ಕೊಡುವುದಿಲ್ಲ. ಒಂದು ಮಂಕುಬಣ್ಣದ ಚಡ್ಡಿ, ಅದರ ಮೇಲೊಂದು ಬಿಳಿಯ ಟೀಶರ್ಟ್ ಇದು ಪ್ರತಿನಿತ್ಯದ ಅವರ ಉಡುಗೆ ಅಂಗಡಿಗಳಲ್ಲಿ ಕೆಲಸ ಮಾಡುವವರಿಗೆ, ಸಣ್ಣ ಪುಟ್ಟ ಇತರ ಉದ್ಯೋಗಗಳಿಗೆ ಈ ಉಡುಗೆಯಲ್ಲಿಯೇ ಅವರು ಶೋಭಿಸುತ್ತಿರುತ್ತಾರೆ. ಆಫೀಸುಗಳಲ್ಲಿ ಕೆಲಸ ಮಾಡುವವರು, ಸ್ವಲ್ಪ ವಯಸ್ಸಾದ ಮಹಿಳೆಯರು ಚಡ್ಡಿಯ ಬದಲು ಪ್ಯಾಂಟನ್ನು ಧರಿಸುತ್ತಾರಷ್ಟೆ. ಅವುಗಳ ಬಣ್ಣಕ್ಕಾಗಲೀ ಅಥವಾ ಬಟ್ಟೆಯ ಕ್ವಾಲಿಟಿಗಾಗಲೀ ಅಷ್ಟೇನೂ ಮಹತ್ವವಿಲ್ಲ. ಸುಲಭವಾಗಿ ಒಗೆಯುವುದಕ್ಕೆ ಮತ್ತು ಐರನ್‌ಗೆ ಅನುಕೂಲವಾದರೆ ಸರಿ.

ಇಷ್ಟೆಲ್ಲ ಸಾಧಿಸಿರುವ ಸಿಂಗಪುರದ ಮಹಿಳೆಯರಿಗೆ ಸಮಸ್ಯೆಯೇ ಇಲ್ಲವೇ ಎಂದರೆ 'ಇಲ್ಲ' ಎಂದೇನೂ ನಿಶ್ಚಿಂತೆಯಾಗಿ ಹೇಳುವುದಕ್ಕಾಗುವುದಿಲ್ಲ. ಸ್ವತಂತ್ರ ಸಮಾಜದ ಸ್ವತಂತ್ರ ಮಹಿಳೆಯ ಒತ್ತಡಗಳು ತೀರಾ ಬೇರೆಯದೇ ಆಗಿರುತ್ತದೆ. ಸಿಂಗಪುರದ ಮಹಿಳೆಯರ ಸೌಂದರ್ಯಪ್ರಜ್ಞೆ ಬಟ್ಟೆ ಬಳೆಗಳಿಂದಲ್ಲ. ಇಡೀ ಶರೀರಕ್ಕೇ ಅನ್ವಯಿಸುವುದಾಗಿರುತ್ತದೆ. ಅವರು ಕೃಶಾಂಗಿಯರೇ ಆಗಿರುವುದಕ್ಕಾಗಿ, ಚರ್ಮದ ಸುಕ್ಕುಗಳನ್ನು ದೂರವಿಟ್ಟಿರುವುದಕ್ಕಾಗಿ, ದೇಹದ ಅಂದಚೆಂದಗಳು ಮಾಸದೇ ಉಳಿಯುವುದಕ್ಕಾಗಿ ಏನೆಲ್ಲ ಕಸರತ್ತುಗಳನ್ನು ಮಾಡುತ್ತಾರೆ. ಸಿಂಗಪುರದಲ್ಲಿ ಬಟ್ಟೆ ಅಂಗಡಿಗಳ ಸಂಖ್ಯೆಯ ಎರಡರಷ್ಟು ಬ್ಯೂಟಿಪಾರ್ಲರ್‌ಗಳಿವೆ. ಅಷ್ಟೇ ಅಲ್ಲ, ಬ್ಯೂಟಿಪಾರ್ಲರ್ ನಡೆಸುವ ಶಿಕ್ಷಣಕ್ಕಾಗಿ ಪ್ರತ್ಯೇಕ ಕಾಲೇಜ್‌ಗಳಿವೆ. ಅಲ್ಲಲ್ಲಿ ಬ್ಯೂಟೀಶಿಯನ್ಸ್‌ಗಾಗಿ ವಿಚಾರ ಸಂಕಿರಣಗಳು ಬೇಲೆ ವ್ಯವಸ್ಥೆಯಾಗುತ್ತಿರುತ್ತವೆ. ಎಲ್ಲಕ್ಕಿಂತ ಹೆಚ್ಚಾಗಿ ಬ್ಯೂಟಿಪಾರ್ಲರ್‌ಗಳು ಮಾರುವ ಗಿಫ್ಟ್ ಕೂಪನ್‌ಗಳನ್ನು ಖರೀದಿಸುವ ಗ್ರಾಹಕರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ. ಇಲ್ಲಿಯ ಮಹಿಳೆ ತನಗೆ ಮನಸ್ಸಿರಲಿ ಬಿಡಲಿ ತನ್ನ ಸೌಂದರ್ಯ ಕೃಶಕಾಯ ಕಾಪಾಡಿಕೊಳ್ಳಲು ಹೆಣಗುತ್ತಲೇ ಇರಬೇಕಾಗುತ್ತದೆ.

ಮತ್ತೊಂದು ನೋವಿನ ಮತ್ತು ಒತ್ತಡದ ಸಂಗತಿಯೆಂದರೆ ಇಲ್ಲಿಯ ಮದುವೆಯ ವ್ಯವಸ್ಥೆಗಳಿಂದ ಮಹಿಳೆಯರ ಮೇಲೆ ಬೀಳುತ್ತಿರುವ ಒತ್ತಡಗಳು. ಪ್ರೇಮ ವಿವಾಹವನ್ನು ಸಾರಸಗಟಾಗಿ ಒಪ್ಪಿಕೊಂಡಿರುವ ಈ ಸಮಾಜ ಅಮೆರಿಕದವರಂತೆ 'ಡೇಟಿಂಗ್' ವ್ಯವಸ್ಥೆಯನ್ನೂ ಸ್ವೀಕರಿಸಿಬಿಟ್ಟಿದೆ. ಶುಭ್ರ ವಾತಾವರಣ, ಸಮೃದ್ಧ ಆಹಾರ ಪಾನೀಯಗಳು. ಇವೆಲ್ಲದರ ಫಲಿತಾಂಶವೆಂದರೆ ಆರೋಗ್ಯ ಕಾಯ! ಸಿಂಗಪುರದ ಹೆಣ್ಣು ಮಕ್ಕಳು ಸುದೃಢವಾಗಿರುತ್ತಾರೆ. ಪರಿಣಾಮವಾಗಿ ಹತ್ತು ವಯಸ್ಸಿಗೇ ಋತುಮತಿಯಾಗುತ್ತಾರೆ. ಮುಗ್ಧತೆ ಹಾಗೂ ಸ್ವತಂತ್ರ ಸಮಾಜದ ಫಲ ಈ ಮಕ್ಕಳು ಹಾಗೂ ಅವರ ತಾಯಂದಿರನ್ನು ಒತ್ತಡಕ್ಕೆ ತಳ್ಳುತ್ತದೆ. ಹನ್ನೊಂದು ವರ್ಷದ ಮಗಳಿದ್ದರೆ ತಾಯಿಗೆ ಒತ್ತಡ ಅಧಿಕವಾಗುತ್ತಾ ಹೋಗುತ್ತದೆ. ಅವಳ ಗೆಳೆಯ ಗೆಳತಿಯರ ಬಗ್ಗೆ ನಿಗಾ ಇಡಬೇಕಾಗುತ್ತದೆ. ಅವಳಿಗೆ ಲೈಂಗಿಕತೆಯ ಬಗ್ಗೆ ತಿಳುವಳಿಕೆ ನೀಡುತ್ತಲೇ ಇರಬೇಕಾಗುತ್ತದೆ. ಮತ್ತು ಮಗಳ ಋತುಚಕ್ರದ ಲೆಕ್ಕವನ್ನೂ ತಾಯಿಯೇ ಗಮನಿಸಬೇಕಾಗುತ್ತದೆ. ಒಂದು ಪತ್ರಿಕೆಯಲ್ಲಿ ಇಂಥ ಸಮಸ್ಯೆಗೆ ತಾನು ಪರಿಹಾರ ಕಂಡುಕೊಂಡಿರುವೆ ಎಂದು ಹೇಳಿರುವ ಉದ್ಯೋಗಸ್ಥ ಮಾತೆಯ ಮಾತುಗಳು ಸ್ತ್ರೀಯರ ಅಸೂಹ್ಯ ಸಮಸ್ಯೆಯನ್ನು ಎತ್ತಿತೋರಿಸುತ್ತದೆ. ಆಕೆ ಹೇಳುತ್ತಾಳೆ ''ನನಗೆ ದಿನದ ಹದಿನಾಲ್ಕು ಗಂಟೆಗಳ ದುಡಿತ ಹೊರಗೆ, ನನ್ನ ಮೂರು ಹೆಣ್ಣು ಮಕ್ಕಳು (ಹತ್ತು ಹನ್ನೆರಡು, ಮತ್ತು ಹದಿನಾಲ್ಕು) ಹೊರಗೆ ಎಲ್ಲಿ ಯಾರೊಂದಿಗೆ ಹೇಗೆ ಓಡಾಡುತ್ತಾರೆ ಎಂದು ನಾನು ಹೇಗೆ ಪತ್ತೆ ಹಚ್ಚಲಿ? ಅದಕ್ಕೇ ನಾನು ರಾತ್ರಿ ಮಲಗುವಾಗ ಮೂವರಿಗೂ ಪ್ರತಿನಿತ್ಯ ಗರ್ಭನಿರೋಧಕ ಮಾತ್ರೆಗಳನ್ನು ನುಂಗಿಸಿಬಿಡುತ್ತೇನೆ''

ಗರ್ಭಿಣಿಯರು ಆಸ್ಪತ್ರೆಗೆ ತಪಾಸಣೆಗೆ ಹೋದಾಗ ಅಲ್ಲಿಯ ವೈದ್ಯರುಗಳು ಮೊದಲು ಮೆಲುಧ್ವನಿಯಲ್ಲಿ ಕೇಳುವ ಪ್ರಶ್ನೆ ''ನಾನು ಯಾರಿಗೂ ಹೇಳುವುದಿಲ್ಲ. ನೀನು ಈ ಮೊದಲು ಎಷ್ಟು ಗರ್ಭಪಾತ ಮಾಡಿಸಿಕೊಂಡಿದ್ದೀ ಎಂದು ಸತ್ಯ ಹೇಳು'' ಹೀಗೆ ಗರ್ಭನಿರೋಧಕ ಮಾತ್ರೆ ನುಂಗುವ, ಗರ್ಭಪಾತಕ್ಕೆ ಒಳಗಾಗುವ ಹದಿಹರೆಯದವರ ಸಮಸ್ಯೆ ದಿನದಿನಕ್ಕೂ ವೃದ್ಧಿಸುತ್ತಿದೆ ಎಂದು ಒಂದು ಅಧ್ಯಯನ ಹೇಳುತ್ತದೆ.

ಸ್ವತಂತ್ರ ಸಮಾಜದ ವಿಚಿತ್ರ ಒತ್ತಡಗಳು ಇವು. ●

# ಸ್ತ್ರೀ ವಿದ್ಯಾಭ್ಯಾಸದ ಪುರಸ್ಕರ್ತೆ ಕಾರ್ನೇಲಿಯಾ ಸೊರಾಬ್ಜಿ

- ಒಂದು ವಿಶ್ಲೇಷಣೆ (1866 - 1954)

ಡಾ.ಬಿ. ಲೀಲಾ, ಮುಂಬೈ

ಸ್ತ್ರೀ ವಿದ್ಯಾಭ್ಯಾಸವು, 19ನೇ ಶತಮಾನದಲ್ಲಿ ಪ್ರಾರಂಭವಾಗಿ ಮಂದಗತಿಯಲ್ಲಿ ಮುಂದುವರಿಯುತ್ತಿದ್ದಾಗ, ಕ್ರೈಸ್ತಮಿಷನರಿಗಳು ಸ್ತ್ರೀ ವಿದ್ಯಾಭ್ಯಾಸಕ್ಕೆ ಹೆಚ್ಚು ಪ್ರೋತ್ಸಾಹವನ್ನು ನೀಡಿದರು. ಕಲ್ಕತ್ತಾ, ಮುಂಬಯಿಯಂಥ, ಪ್ರಮುಖವಾದ ಊರಿನಲ್ಲಿ ಸ್ತ್ರೀ ವಿದ್ಯಾಭ್ಯಾಸದ ತ್ವರಿತಗತಿಯನ್ನು ಕಾಣುತ್ತೇವೆ. ಮುಂಬಯಿಯ ಸಾಮಾಜಿಕ ಸುಧಾರಕರು ಕೂಡ ಸ್ತ್ರೀಪ್ರಗತಿಯಲ್ಲಿ ಹೆಚ್ಚಿನ ಆಸಕ್ತಿ ಉಳ್ಳವರಾಗಿದ್ದರು. ಆದರೆ ಇದೆಲ್ಲ ಕೇವಲ ಪ್ರಾಥಮಿಕ, ಮಾಧ್ಯಮಿಕ ವಿದ್ಯಾಭ್ಯಾಸಕ್ಕೆ ಸೀಮಿತವಾಗಿತ್ತು. ಮುಂಬಯಿಯ ಪಂಡಿತಾ ರಮಾಬಾಯಿ, ಡಾ॥ ಆನಂದಿಬಾಯಿ ಜೋಷಿ ಇವರ ಚರಿತ್ರೆಯನ್ನು ಗಮನಿಸಿದಾಗ ಉಚ್ಚ ಶಿಕ್ಷಣಕ್ಕೆ ಪ್ರೋತ್ಸಾಹವಿದ್ದಲ್ಲಿ, ಸ್ತ್ರೀ ಉನ್ನತ ಕಾರ್ಯವನ್ನು ನಿರ್ವಹಿಸಬಲ್ಲಳು ಎಂಬುದು ವಿದಿತವಾಗುತ್ತದೆ.

ಕಾರ್ನೇಲಿಯಾ ಸೊರಾಬ್ಜಿಯವರ ತಂದೆ ರೆವ್‌ರೆಂಡ್ ಸೊರಾಬ್ಜಿ ಕರಷಡ್ಜ ಲಂಗ್ರಾನ, ಪಾರ್ಸಿ ಜನಾಂಗಕ್ಕೆ ಸೇರಿದ್ದರೂ, ಕ್ರೈಸ್ತ ಮತಕ್ಕೆ ಸೇರಿ ಪಾದ್ರಿಯಾಗಿ ವಿದ್ಯಾಸಂಸ್ಥೆಯನ್ನು ಪೂನಾದಲ್ಲಿ ಸ್ಥಾಪಿಸಿದರು. ಅವರ ಪತ್ನಿ ಫ್ರಾನ್ಸಿನ ಸೊರಾಬ್ಜಿ ಹಿಂದೂ. ಆದರೆ ಕ್ರೈಸ್ತಮತಕ್ಕೆ ಒಲಿದರು. ಸ್ತ್ರೀ ವಿದ್ಯಾಭ್ಯಾಸಕ್ಕೆ ಶ್ರಮಿಸಿದ ದಂಪತಿಗಳಿವರು. ಸ್ತ್ರೀ ವಿದ್ಯಾಭ್ಯಾಸದ ಮೇಲೆ ವಿಶೇಷವಾದ ಅಭಿಮಾನವಿದ್ದ ಕಾರ್ನೇಲಿಯಾರವರ ತಾಯಿ ಫ್ರಾನ್ಸಿನ 1886 ರಲ್ಲೇ ಇಂಗ್ಲೆಂಡ್ ದೇಶದಲ್ಲಿ ಸಂಚಾರ ಮಾಡಿ ತಾವು ನಡೆಸುತ್ತಿದ್ದ ಪೂನಾ ಶಿಕ್ಷಣ ಸಂಸ್ಥೆಯ ಬಗ್ಗೆ ಹೊರದೇಶದಲ್ಲಿ ಅರಿವನ್ನು ಉಂಟುಮಾಡಿದರು. ಸಾಂಕ್ರಾಮಿಕ ರೋಗಗಳಾದ ಕಾಲರಾ, ಪ್ಲೇಗ್ ಉಪದ್ರವವಾದಾಗ ಫ್ರಾನ್ಸಿನರವರು ತಮ್ಮ ಸಾಂತ್ವನದ ಮಾತುಗಳಿಂದ ರೋಗಿಗಳಲ್ಲಿ ಧೈರ್ಯ ತುಂಬಿ ಸದಾ ಸಾಮಾಜಿಕ ಸೇವೆ ಕೈಗೊಂಡಿದ್ದರು.1

ಸ್ತ್ರೀ ವಿದ್ಯಾಭ್ಯಾಸ ಮುಂದುವರಿದಿದ್ದರೂ ಉಚ್ಚ ಶಿಕ್ಷಣಕ್ಕೆ, ಹೆಂಗಸರಿಗೆ ಪ್ರಾಮುಖ್ಯತೆ ಇರಲಿಲ್ಲ. ತಮ್ಮ 16ನೇ ವಯಸ್ಸಿನಲ್ಲಿ ಪುಣೆಯ ವಿಕ್ಟೋರಿಯಾ ಹೈಸ್ಕೂಲಿನಿಂದ ಉನ್ನತ ಶ್ರೇಣಿಯಲ್ಲಿ ಮೆಟ್ರಿಕ್ ಪರೀಕ್ಷೆಯಲ್ಲಿ ಪಾಸಾದ ಕಾರ್ನೇಲಿಯಾ ಮುಂದಿದ್ದ ಪ್ರಶ್ನೆ ಕಾಲೇಜಿಗೆ ಸೇರಬೇಕು ಹೇಗೆ ? ಮುಂಬಯಿ ಪ್ರಾಂತ್ಯದಲ್ಲಿ ಹೆಂಗಸರಿಗೆ ಪ್ರತ್ಯೇಕ ಕಾಲೇಜಾಗಲಿ ಅಥವಾ ಪ್ರವೇಶವಾಗಲಿ ಇರಲಿಲ್ಲ. ಪುಣೆಯ ಡಕ್ಕನ್ ಕಾಲೇಜಿಗೆ ದಾಖಲಾದ ಪ್ರಥಮ ಮಹಿಳೆ ಕಾರ್ನೇಲಿಯಾ (1884).

ಮುಂದೆ 1888ರಲ್ಲಿ ಕಾಲೇಜಿಗೆ ಮೊದಲನೆಯವರಾಗಿ B.A.(Hons) ಪದವಿ ಪಡೆದರು. ಗಂಡು ಹುಡುಗರ ಕಾಲೇಜಿನಲ್ಲಿ ಇಂಗ್ಲಿಷ್ ಸಾಹಿತ್ಯವನ್ನು ಕಲಿಸಲು ಆಹ್ವಾನ ಬಂದಿತು. ಇದನ್ನು ಅಂಗೀಕರಿಸಿ ಕಾರ್ನೇಲಿಯಾ ಗುಜರಾತಿಗೆ ಹೋಗಿ, ಅಲ್ಲಿ ವಿದ್ಯಾರ್ಥಿಗಳ ಮೆಚ್ಚಿಗೆಗೆ ಪಾತ್ರರಾದರು. ಅಲ್ಲಿನ ಕಾಲೇಜಿನ ಪ್ರಾಧ್ಯಾಪಕರು ಸೌಹಾರ್ದದಿಂದ ನಡೆದುಕೊಂಡರು. ಅಲ್ಲಿನ ಮುಖ್ಯ ಪ್ರಾಧ್ಯಾಪಕ ಹುದ್ದೆ ತೆರವಾದಾಗ, ಕಾರ್ನೇಲಿಯಾ ಸ್ವಲ್ಪಕಾಲ ತೆರವಾದ ಸ್ಥಾನವನ್ನು ತುಂಬಿದ್ದಲ್ಲದೆ, ಸಮರ್ಪಕವಾಗಿ ತಮ್ಮ ಕೆಲಸವನ್ನು ನಿರ್ವಹಿಸಿದರು. ಗುಜರಾತಿನಲ್ಲಿ, ಅಧ್ಯಾಪಕ ವರ್ಗದಿಂದ ಮತ್ತು ವಿದ್ಯಾರ್ಥಿಗಳಿಂದ ಮೆಚ್ಚಿಗೆಗೆ ಪಾತ್ರರಾದ ಕಾರ್ನೇಲಿಯಾ, ಗುಜರಾತಿನಲ್ಲಿ ಹೆಚ್ಚು ದಿನ ಮುಂದುವರಿಯಲಿಲ್ಲ. ತಮ್ಮ ಗಳಿಕೆಯಲ್ಲಿ 50 ಪೌಂಡು ಉಳಿಸಿ ಇಂಗ್ಲೆಂಡಿನತ್ತ ತೆರಳಿದರು.

19ನೇ ಶತಮಾನದ ಇಂಗ್ಲೆಂಡಿನತ್ತ ನೋಡುವಾಗ, ಸ್ತ್ರೀ ವಿದ್ಯಾಭ್ಯಾಸ ಆಶಾಜನಕವಾಗಿ ಕಾಣುವುದಿಲ್ಲ. ಇಂಗ್ಲೆಂಡ್ ಆಗ ತಾನೆ ಸ್ತ್ರೀ ವಿದ್ಯಾಭ್ಯಾಸದ ಕಡೆ ಗಮನ ಹರಿಸಿತ್ತು. ಹೆಂಗಸರಿಗೆ ತೆಗವಿದ್ದ ಎರಡು ವಿಶ್ವವಿದ್ಯಾನಿಲಯವೆಂದರೆ ಆಕ್ಸ್‌ಫರ್ಡ್ ಮತ್ತು ಕೇಂಬ್ರಿಡ್ಜ್. ಅದೇ ತಾನೆ ಕಾನೂನು ವಿದ್ಯಾಭ್ಯಾಸದ ಪ್ರವೇಶ ದೊರಕಿಸಿಕೊಂಡ ಕಾರ್ನೇಲಿಯಾ ಅನೇಕ ತೊಡಕುಗಳನ್ನು ಎದುರಿಸಬೇಕಾಯಿತು. ನ್ಯಾಯಶಾಸ್ತ್ರವನ್ನು ಒಂದು ವರ್ಷ ಅಭ್ಯಾಸ ಮಾಡಿ, ಪೌರನೀತಿಯನ್ನು ಎರಡನೆ ವರುಷ ಅಭ್ಯಾಸ ಮಾಡಬೇಕಾಯಿತು. ಅತಿ ಮುಖ್ಯವಾದ ಸಂಗತಿ ಎಂದರೆ ಲಂಡನ್ ಪರೀಕ್ಷಕ ಕಾರ್ನೇಲಿಯಾ ಮಹಿಳಾ ವಿದ್ಯಾರ್ಥಿನಿ, ಆದ್ದರಿಂದ ಅವರನ್ನು ಪರೀಕ್ಷೆಗೆ ಕೂಡಿಸಲು ನಿರಾಕರಿಸಿದನು. ಉಪಕುಲಪತಿಯವರಾದ Jowett ರವರ ಮಧ್ಯಸ್ತಿಕೆಯಿಂದ ಕಾರ್ನೇಲಿಯಾ ಪರೀಕ್ಷೆಗೆ ಕುಳಿತರು. ಇಂಗ್ಲೆಂಡಿನಲ್ಲಿ ಹಲವಾರು ಜನ ಪ್ರತಿಭಾವಂತರ ಪರಿಚಯವಾಯ್ತು. ಮ್ಯಾಕ್ಸ್‌ಮುಲ್ಲರ, ಟೆನಿಸನ್, ಬರ್ನಾಡ್ ಷಾ ಕವಿಗಳ ಪ್ರಭಾವ ಇವರ ಮೇಲಾಯ್ತು. ಟೆನಿಸನ್ ತಮ್ಮ ಅಪ್ರಕಟಿತವಾಗಿದ್ದ ಅಕಬರ್ ಎಂಬ ಪದ್ಯವನ್ನು ಓದಿ ತೋರಿಸಿದರಂತೆ.

ಇಂಡಿಯಾಕ್ಕೆ ಹಿಂದಿರುಗಿ ವಕೀಲೆ ಆಗಿ ದಾಖಲೆ ಮಾಡಲು 1897ರಲ್ಲಿ ತಮ್ಮ ಅರ್ಜಿಯನ್ನು ನಮೂದಿಸಿದರು. ಆದರೆ ಮುಂಬಯಿ ಹೈಕೋರ್ಟ್ ಅದನ್ನು ತಿರಸ್ಕರಿಸಿತು ಮತ್ತು ಹೈಕೋರ್ಟ

ಪ್ಲೀಡರ್ ಕೆಲಸ ಮಾಡಲು ತಿಳಿಸಿತು. 1919ರವರೆಗೆ ಹೆಂಗಸರಿಗೆ ವಕೀಲ ವೃತ್ತಿಗೆ ದಾಖಲಾಗಲು ಅನುಮತಿ ಇರಲಿಲ್ಲ. ಕಾರ್ನೇಲಿಯಾ ಸಾಲಿಸಿಟರ್ ಪರೀಕ್ಷೆ ಪಾಸು ಮಾಡಿದರೂ ಮಹಿಳೆ ಎಂಬ ಏಕೈಕ ಕಾರಣದಿಂದ ನಿರಾಕರಿಸಿತು. ಅದೂ ಅಲ್ಲದೆ ಇಂಗ್ಲೆಂಡಿನಲ್ಲಿ ಇನ್ನೂ ಮಹಿಳಾ ವಕೀಲರು ಇರಲಿಲ್ಲವಲ್ಲ!

ಇಂತ ಅನಿರ್ದಿಷ್ಟ ವಾತಾವರಣದಲ್ಲಿದ್ದಾಗ ತಮ್ಮ ಮನಸ್ಥಿತಿಯನ್ನು ಆಕೆ ಈ ರೀತಿ ವಿವರಿಸಿದ್ದಾರೆ "There was nothing for it but to continue being a rover working from the end of a need to be met not from that of an equal title with men to the reward of legal work" (India calling p.102)

ಕಾರ್ನೇಲಿಯಾ ಸೊರಾಬ್ಜಿ ಕಾಮಾ ಭಾರತದ ಮೊದಲ ಕಮ್ಯೂನಿಸ್ಟ್ ಮಹಿಳೆ. ಅವರ ಬದುಕು ಹಲವು ನಿಟ್ಟಿನಿಂದ ಕುತೂಹಲಕಾರಿ. ಶೈಕ್ಷಣಿಕ ರಂಗದ ಅವರ ಸಾಧನೆಯ ಮುಖವನ್ನು ಕುರಿತು ಶ್ರೀಮತಿ ಬಿ.ಲೀಲಾ ಬೆಳಕು ಚೆಲ್ಲಿದ್ದಾರೆ.

ಕಾರ್ನೇಲಿಯಾ ಇಂದೂರು, ಕಾಥೆವಾಡ ಊರುಗಳಲ್ಲಿ, ಅನುವಂಶಿಕ ಅಧಿಕಾರ, ಉತ್ತರಾಧಿಕಾರ, ಜೀವನಾಂಶ, ಸ್ತ್ರೀಧನ ಇದಕ್ಕೆ ಸಂಬಂಧಪಟ್ಟ ವಿಷಯದಲ್ಲಿ ವಕಾಲತ್ತು ವಹಿಸಿದರು. 1919ರಲ್ಲಿ ಅಲಹಾಬಾದ್ ಹೈಕೋರ್ಟ್ ವಕೀಲರಾಗಿ ದಾಖಲೆ ಮಾಡಲು ಅನುಮತಿ ಸಿಕ್ಕಿತು. 1922 Bar-at-law ಪದವಿಯನ್ನು ಲಂಡನ್‌ನಿಂದ ಸಂಪಾದಿಸಿದರು. ಇದು ಸ್ತ್ರೀ ಉನ್ನತ ಪ್ರಗತಿಯ ಒಂದು ಮೈಲಿಗಲ್ಲು. 1924ರಲ್ಲಿ ಕಲ್ಕತ್ತಾ ಹೈಕೋರ್ಟಿನಲ್ಲಿ ತಮ್ಮ ವೃತ್ತಿ ದಾಖಲೆ ಮಾಡಿ ಹೆಣ್ಣು ಮಕ್ಕಳ ಉದ್ಧಾರಕ್ಕಾಗಿ ನಿಂತರು.

**ಕಾರ್ನೇಲಿಯಾ ಬರವಣಿಗೆ ಮತ್ತು ಸಾಮಾಜಿಕ ಸುಧಾರಣೆ**

ಕಾರ್ನೇಲಿಯಾ ತಮ್ಮ ಅನುಭವದಿಂದ ಸ್ತ್ರೀ ಎಷ್ಟು ನಿಸ್ಸಹಾಯಕಳಾಗಿ ಇರುವಳು ಮತ್ತು ಇದರಿಂದ ಮಾನಸಿಕ, ಶಾರೀರಕ ತೊಂದರೆ ಉಂಟಾಗಿ ಅವಳ ವ್ಯಕ್ತಿತ್ವಕ್ಕೆ ಧಕ್ಕೆ ಬರಬಹುದು ಎಂಬುದನ್ನು ಅವರು ಬರೆದಿರುವ ಪುಸ್ತಕಗಳಾದ India calling (1935) ಮತ್ತು India recalled ನಲ್ಲಿ ಕಾಣಬಹುದು. ಇದು ಆಧುನಿಕ ಭಾರತದಲ್ಲಿ ಸ್ತ್ರೀಸಮಸ್ಯೆಯನ್ನು ಕುರಿತಾದ ಮೊದಲನೆ ಪುಸ್ತಕವೆಂದು ಹೇಳಬಹುದು. ಸ್ತ್ರೀ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಕೊಟ್ಟಿರುವ ಮೈಸೂರು, ಬರೋಡ ಬಗ್ಗೆ ತಮ್ಮ ಮೆಚ್ಚಿಗೆಯನ್ನು ಸೂಚಿಸಿರುವರು. "A goodly record truely and in some independent states, Mysore and Baroda for instance the advance made is even more remarkable; an advance brought about by the efflux of time and by masey influences". (Cornelia Sorabji : India Recalled p.276) ಕಾರ್ನೇಲಿಯಾ ಸೊರಾಬ್ಜಿಯವರ ಸಾಮಾಜಿಕ ಸುಧಾರಣೆಯ ಬಗ್ಗೆ ಇರುವ ಕಳಕಳಿಯನ್ನು ಅವರ ಬರವಣಿಗೆಯಿಂದ ತಿಳಿಯಬಹುದು. ಅವರ ಮತ ಮಧ್ಯಮಾರ್ಗಗಾಮಿಗಳಾದ ಆರ್.ಜಿ. ಭಂಡಾರ್‌ಕರ್ ಕಡೆಗಿತ್ತು. ಸ್ತ್ರೀಗೆ ವಿದ್ಯಾಭ್ಯಾಸವು ಅತ್ಯಂತ ಅವಶ್ಯಕ, ಸ್ತ್ರೀಯ ಅಸಹಾಯಕತೆ, ಅಸ್ಪೃಶ್ಯತೆ ಇವುಗಳನ್ನು ಹೋಗಲಾಡಿಸಲು ಪ್ರಯತ್ನಿಸಬೇಕು. ಪರೀಕ್ಷೆಯಲ್ಲಿ ತೇರ್ಗಡೆ ಆಗುವದು ಮಾತ್ರ ಮಹಿಳೆಯ ಉದ್ದೇಶವಲ್ಲ. ಸ್ತ್ರೀ ತನ್ನ ಪ್ರಗತಿಯನ್ನು ತನಗೆ ತಿಳಿದ ಕೈಗೆಲಸ, ಸಂಗೀತ, ಚಿತ್ರಕಲೆ, ಆಟ ಇವುಗಳಿಂದ ವೃದ್ಧಿಪಡಿಸಿ ಕೊಳ್ಳಬಹುದು ಮತ್ತು ಅಭಿರುಚಿಗೆ ತಕ್ಕಂತೆ ಓದನ್ನು ಆರಿಸಬೇಕು.

ಕಾರ್ನೇಲಿಯಾ ಕಾನೂನಿನ ಬಗ್ಗೆ ಹೆಚ್ಚಿನ ವಿಶ್ವಾಸ ಹೊಂದಿದ್ದರು. ಸಾಮಾಜಿಕ ಸುಧಾರಣೆಯ ಗೆಲುವಿಗೆ ನಿಧಾನವಾದ ಕ್ರಮ ಮತ್ತು ಜನ ಸಮುದಾಯದ ಮಧ್ಯೆ ಇರುವಿಕೆ ಮತ್ತು ಸಂಪ್ರದಾಯ ಸಂಕೋಲೆಯಲ್ಲಿದ್ದ ಸ್ತ್ರೀಗೆ ತಿಳುವಳಿಕೆಯನ್ನು ಸಾವಧಾನವಾಗಿ ತಿಳಿಸಿಕೊಡುವದು ಮುಖ್ಯವಾದ ಕ್ರಮ. ಬಂಗಾಳ, ಬಿಹಾರ, ಒರಿಸ್ಸಾ ಪ್ರಾಂತದಲ್ಲಿ ಅಧಿಕಾರಿಯಾಗಿದ್ದರಿಂದ ಪರದೆಯ ಹಿಂದಿದ್ದ ಹೆಂಗಸರ ಸ್ಥಿತಿಯನ್ನು ಅಭ್ಯಾಸ ಮಾಡಿದ್ದರು. ಪಾಶ್ಚಾತ್ಯ ದೇಶದಲ್ಲಿ ಹೆಂಗಸರಿಗೆ ಇರುವ ಮಾನ್ಯತೆ, ತುಲನಾತ್ಮಕವಾಗಿ ಅಭ್ಯಾಸ ಮಾಡಿ, ತಾವು ಯಾವುದೇ ಸಾಮಾಜಿಕ ಸುಧಾರಕರ ಗುಂಪಿಗೂ ಸೇರದೆ ತಮ್ಮದೇ ಧೋರಣೆಯಿಂದ ಸ್ತ್ರೀ ಸುಧಾರಣೆಯಲ್ಲಿ ಮಹತ್ವವಾದ ಪಾತ್ರ ವಹಿಸಿದರು.

ಗಂಡಸರ ದೌರ್ಜನ್ಯ, ಸಾಮಾಜಿಕ ಕಟ್ಟಲೆಗಳಿಂದ ಸುತ್ತಲ್ಪಟ್ಟು ಸ್ತ್ರೀ ಸಮಾಜದಿಂದ ಬಹಿಷ್ಕೃತಳೂ, ವಂಚಿತಳೂ ಆಗಿರುತ್ತಾಳೆ ಮತ್ತು ಸಂಬಂಧೀಕರಿಂದ ಸುತ್ತುವರಿಯಲ್ಪಟ್ಟು ಆತ್ಮವಂಚನೆ ಮಾಡಿಕೊಂಡಿರುತ್ತಾಳೆ. ಇಂಥ ಸ್ತ್ರೀ ಮುಕ್ತಿ ಬಗ್ಗೆ ಕಾರ್ನೇಲಿಯಾ ಹೆಚ್ಚಿನ ಗಮನಕೊಟ್ಟರು. ತಾವು ಬರೆದ ಚಿಕ್ಕ ಕಥೆಗಳಲ್ಲಿ ಮೂಢನಂಬಿಕೆ, ಜಾತಿಪದ್ಧತಿ, ಆಚಾರ, ಸಂಪ್ರದಾಯ, ಪೂಜಾರಿಗಳ ದುರಾಸೆ, ಮನಮುಟ್ಟುವಂತೆ ವರ್ಣಿಸಿರುವರು.

Love and Life behind the Purdah ಇಂದ ಆಯ್ದ ಕಥೆಯಲ್ಲಿ ಪ್ಲೇಗ್ ಆವರಿಸಿದಾಗ ಬ್ರಿಟಿಷ್ ಸರ್ಕಾರವು ವಿಧಿಸಿದ ಕಟ್ಟಳೆಯನ್ನು ಮೀರಿ ಸಾವನ್ನಪ್ಪಿದ ಕಥೆ ಇದೆ. ಮೂಢನಂಬಿಕೆ ಮತ್ತು ಜಾತಿಯಿಂದ ಸುತ್ತುವರಿದ ಮುಗ್ಧವಾದ ಸೀತೆ ಮತ್ತು ಅವಳ ಕುಟುಂಬ ಮರಣವನ್ನಪ್ಪಿದ ಕಥೆ ಇದೆ. ಪ್ಲೇಗ್ ಎಲ್ಲೆ ಮೀರಿದಾಗ,

ಪ್ಲೇಗ್ ನಿರೋಗ ಪ್ರತಿಬಂಧಕ ಅಧಿಕಾರಿಗಳನ್ನು ಮನೆಮನೆಗೆ ಕಳುಹಿಸಿ, ಮಾಹಿತಿ ದೊರಕಿಸುವಂತೆ ಸರ್ಕಾರದ ಕಟ್ಟಪ್ಪಣೆಯಾಗಿತ್ತು. ಪ್ಲೇಗ್ ನಿರೋಧ ಔಷಧಿ ತಲುಪಿದೆ ಎಂಬುದನ್ನು ಖಾತ್ರಿ ಮಾಡಲು ಸರ್ಕಾರ ಏರ್ಪಾಡು ಮಾಡಿರುತ್ತದೆ. ಸೀತಾ ಎಂಬುವಳು, ತನ್ನ ಮನೆಯನ್ನು ಸಾರಿಸಿ, ಸೆ.. ರೂಮಿನಲ್ಲಿಡಿಸಿ, ಅಧಿಕಾರಿಗಳಿಗೆ ತಾನು ಮುಂಜಾಗ್ರತೆ ವಹಿಸಿರುವಳೆಂದು ನಂಬಿಸುತ್ತಾಳೆ. ತನ್ನ ಮಾವ ಮತ್ತು ಮಗ ಗಂಟಲ ಬೇನೆಯಿಂದ ನರಳುತ್ತಿರುವರು. ಅವರನ್ನು ಮರದ ಕೆಳಗೆ ಕೂಡಿಸಿ ಸೀರೆಯಿಂದ ಮರೆಮಾಡಿರುತ್ತಾಳೆ. ಮೇಲಧಿಕಾರಿಗಳಿಗೆ ಸಮರ್ಪಕ ಉತ್ತರ ನೀಡಿರುತ್ತಾಳೆ. ಇನ್ನೇನು ಹೊರಡಬೇಕಾದ ಸಮಯದಲ್ಲಿ ಪ್ಲೇಗ್ ಅಧಿಕಾರಿ ಮನೆಯ ಯಜಮಾನಿಯನ್ನು ಒಂದು ಸಾರಿ ಪರೀಕ್ಷಿಸಬೇಕೆನ್ನುತ್ತಾನೆ. ಸೀತೆ ತಾನೆ ಬೇನೆಯಿಂದ ನರಳುತ್ತಿರುತ್ತಾಳೆ. ಅದಕ್ಕೆ ಮೊದಲು ಸೀತೆ ತನ್ನ ಮಾವನಿಗೆ ತನ್ನನ್ನು ಸಿಂಗೂರಿನಲ್ಲಿ ಕಾಣಬೇಕೆಂದು ತಿಳಿಸಿರುತ್ತಾಳೆ. ಸೀತೆಯ ಮಾವ ಕೊನೆಯ ಕ್ರಿಯೆಯನ್ನು ಸತ್ತ ಮೊಮ್ಮನಿಗೆ ಮಾಡಲು ಬಂದಿರುತ್ತಾನೆ. ಅಲ್ಲೇ ಸಾವನ್ನಪ್ಪುವನು. ಸೀತೆ ಪ್ಲೇಗ್ ಶಿಬಿರದಿಂದ ತಪ್ಪಿಸಿ ದಾರಿಯಲ್ಲಿ ಮರಣ ಹೊಂದುವಳು. ಹೀಗೆ ಮೂರು ಜೀವಗಳು ಸಕಾಲದಲ್ಲಿ ವೈದ್ಯರನ್ನು ಕಾಣದೆ ಸಾಯುವರು. ಕೇವಲ ತಮ್ಮ ಜಾತಿಯನ್ನು ಉಳಿಸುವುದಕ್ಕೋಸ್ಕರ.

India Recalled (1935) ಪುಸ್ತಕದಲ್ಲಿ, ಅನಾರ್ಕಲಿದೇವಿ ಎಂಬ ಕಥೆಯಲ್ಲಿ ಸತಿಪದ್ಧತಿ ಬಗ್ಗೆ ವಿವರಣೆ ಇದೆ. ಸತಿ ಪದ್ಧತಿಯು ಆಚರಣೆ ಇದ್ದ ಬಂಗಾಲದ ಅವಿಭಕ್ತ ಕುಟುಂಬದ ಹಿನ್ನೆಲೆಯಲ್ಲಿ ಈ ಕಥೆ ಇದೆ. 11 ವರುಷದ ಹುಡುಗಿ, ಸತಿ ಹೋಗಲು ಕಾನೂನಿನ ಪ್ರಕಾರ ಸಾಧ್ಯವಿಲ್ಲ. ಅತ್ತೆ ಸೊಸೆಯನ್ನು ಸತಿಯಾಗಲು ತಯಾರಿಸಿರುತ್ತಾಳೆ. ಒಟ್ಟಿನಲ್ಲಿ ಬಾಳಬೇಕಾದ ಸೊಸೆ ಒಂಟಿಯಾಗಿ ದೇವರ ಪ್ರಾರ್ಥನೆಯಲ್ಲಿ ತನ್ನ ಜೀವನವನ್ನು ಸವೆಸುತ್ತಾಳೆ.

ಮತ್ತೊಂದು ಕಥೆಯಲ್ಲಿ 'A living sacrifice from love and life behind the Purdah. ಇದು ಅಕ್ಕತಂಗಿಯರ ಕಥೆ. ಸತಿಗೆ ಸಂಬಂಧಪಟ್ಟಿದೆ. ಈ ಕಥೆಯನ್ನು ಓದಿದಾಗ ಹಲವಾರು ಹೆಂಗಸರು ಗಂಡ ಸತ್ತ ನಂತರ ಸತಿಯನ್ನು ಸ್ವಾಗತಿಸದೆ ಇರುವುದು ಮನಗಾಣುವುದು. ಮತ್ತು 'ಸತಿ'ಯೇ ಪರಧರ್ಮವಲ್ಲ ಎಂಬುದು ವಿದಿತವಾಗುತ್ತದೆ.

**ಮೂಢನಂಬಿಕೆ :**

ಹಲವಾರು ಸಲ ವಿದ್ಯಾವಂತರೂ ಕೂಡ ಮೂಢನಂಬಿಕೆಗೆ ಬಲಿಯಾಗುತ್ತಾರೆ ಎಂಬುದನ್ನು ಕಾರ್ನೇಲಿಯಾರವರು ತಮ್ಮ 'Love and life behind Puradah' ಎಂಬ ಕಥೆಯಲ್ಲಿ ನಿರೂಪಿಸಿರುವರು.

ಪ್ಲೇಗ್ ಮಾರಿಯ ಉಪಶಮನಕ್ಕಾಗಿ ಹಲವಾರು ಅಬಲೆಯರು ಮುಂದು ಬಂದಾಗ, ಅದರಲ್ಲಿ ಡಾಕ್ಟರ್ ಪರೀಕ್ಷೆ ಪಾಸು ಮಾಡಿದವಳು, ಒಬ್ಬಳು ಈ ಪ್ರಯೋಗದಿಂದ ಮರಣ ಹೊಂದುವಳು. ಮತ್ತೊಂದು ಸಂದರ್ಭದಲ್ಲಿ ಮೈಲಿ ಎದ್ದಿರುವ ಮಗುವನ್ನು ನೆಲದ ಮೇಲೆ ಮಲಗಿಸಿ, ಕಾಳಿಮಾತೆಗೆ ಅನುಗ್ರಹಿಸುವಂತೆ ಬೇಡುವದು ಸ್ವಾಭಾವಿಕವಾಗಿತ್ತು.

ಈ ಸಂದರ್ಭದಲ್ಲಿ ಒಬ್ಬ ಅನುಭವಿ ಡಾಕ್ಟರನ್ನು ಕರೆದುತರುವ ಸಾಹಸವನ್ನು ಯಾರೂ ಮಾಡುತ್ತಿರಲಿಲ್ಲ. ಡಾಕ್ಟರ್ ಎಂದರೆ ಪೈಶಾಚಿಕ ಸ್ವರೂಪ, ಡಾಕ್ಟರ್ ಬದಲು ಯಕ್ಷಿಣಿ, ಪೂಜಾರಿ ಇವರ ಮೊರೆಹೋಗುತ್ತಿದ್ದರು. ಮತ್ತು ಮಾನಸಿಕ ವೇದನೆಯಿಂದ ಬಳಲುವವರಿಗೆ ಮಧ್ಯರಾತ್ರಿ ಚಮ್ಮಾರನಿಂದ ಒಂದು ಕೆಂಪು ದಾಸವಾಳದಿಂದ ಗದ್ದಕ್ಕೆ ಹೊಡೆಯಲಾಗುತ್ತಿತ್ತು.

ತಮ್ಮ ವೃತ್ತಿಯಲ್ಲಿ ಕಂಡ ಹಲವಾರು ಪ್ರಸಂಗಗಳನ್ನು ಕಾರ್ನೇಲಿಯಾ ತಮ್ಮ ಕಥೆಯ ಮೂಲಕ ನಿರೂಪಿಸಿರುವರು. ಮತ್ತು ಪರದೆಯ ಹಿಂದಿದ್ದ ಹೆಂಗಸಿನ ಅಸಹಾಯಕತೆಯನ್ನು ಮನಮುಟ್ಟುವಂತೆ ವರ್ಣಿಸಿರುವರು.

ಕಾರ್ನೇಲಿಯಾರವರು ಸಂಪ್ರದಾಯಬದ್ಧವಾದ ಹಿಂದೂ ಮಹಿಳೆಗೋಸ್ಕರ ಒಂದು ಕಾರ್ಯಸೂಚಿಕೆಯನ್ನು ತಯಾರಿಸಿದ್ದರು. ಈ ಸೂಚಿಕೆ ಹೆಂಗಸರಿಗೆ ದೈನಂದಿನ ಜೀವನದಲ್ಲಿ ಮಹಿಳೆಯರಿಗೆ ಅಗತ್ಯವಾದ ಓದುಬರಹ, ಲೆಕ್ಕಪತ್ರ ಇಡುವಿಕೆ, ಆರೋಗ್ಯ, ಖಾಯಿಲೆಗೆ ಚಿಕಿತ್ಸೆ, ಚರಿತ್ರೆ, ಭೂಗೋಳ ಉಪಯುಕ್ತ ಮಾಹಿತಿಯನ್ನು ಒಳಗೊಂಡಿತ್ತು. ವಿದ್ಯೆಯ ಅಗತ್ಯವನ್ನು ಕಾರ್ನೇಲಿಯಾ ಒತ್ತಿ ಹೇಳಿದ್ದಲ್ಲದೆ ಪರದೆಯ ಹಿಂದಿದ್ದ ಹೆಂಗಸರಿಗೆ, ಉಪಯುಕ್ತವಾದ ಮಹಿಳಾ ಅಧಿಕಾರಿಯನ್ನು ನೇಮಿಸಲು ಸರ್ಕಾರವನ್ನು ಒತ್ತಾಯಪಡಿಸಬೇಕೆಂದು ಅವರ ಸೂಚನೆಯಾಗಿತ್ತು. ಕಾಲಕ್ರಮೇಣ ಜನಸಾಮಾನ್ಯರಲ್ಲಿ ಸುಧಾರಣ ಮನೋಭಾವ ಮೂಡಬಹುದೆಂದು ಕಾರ್ನೇಲಿಯಾ ನಂಬಿದ್ದರು.

ಹಿಂದೂ ಹೆಂಗಸರ ಕಷ್ಟಗಳನ್ನರಿತಿದ್ದ ಕಾರ್ನೇಲಿಯಾ ಮಹಿಳೆಗೆ ನರ್ಸಿಂಗ್ ಮತ್ತು ಡಾಕ್ಟರ್ ತರಪೇತಿ ಅತ್ಯವಶ್ಯಕವೆಂದು ತಿಳಿದಿದ್ದರು. ಮತ್ತು ಬ್ರಾಹ್ಮಣ ಮಹಿಳೆಗೆ ಸೂಲಗಿತ್ತಿಯರ ತರಪೇತಿ ಅತ್ಯವಶ್ಯಕವೆಂದು ಅಂತ ಹೆಂಗಸರು ಸೂಲಗಿತ್ತಿಯ ತರಪೇತಿಗೆ ಸಿದ್ಧವಾದಲ್ಲಿ ಅವರಿಂದ ಕೀಳು ಕೆಲಸವನ್ನು ಮಾಡಿಸಬಾರದೆಂದೂ ಇದರಿಂದ ಅವರು ಜಾತಿಭ್ರಷ್ಟರಾಗುವ ಹೆದರಿಕೆಯನ್ನು ವ್ಯಕ್ತಪಡಿಸಬಹುದೆಂದೂ ಸೂಚಿಸಿರುವರು.

ಅವಿಭಕ್ತ ಕುಟುಂಬದ ವಿಭಜನೆಯಿಂದ ಹಿಂದೂ ವಿಧವೆಯರನ್ನು ಅನಾದರಣೆಯಿಂದ ಕಾಣಲಾಗುತ್ತಿದೆ. ವಿಧವೆಯರು ನರ್ಸ್

ತರಬೇತಿಯನ್ನು ಹೊಂದಿದಲ್ಲಿ ಅವರು ಸ್ವಾವಲಂಬಿಗಳೂ ಆಗುವದಲ್ಲದೆ ಅವರಿಂದ ಪರೋಪಕಾರವಾಗುವುದು, ಮತ್ತು ಜಾತಿಭ್ರಷ್ಟರಾಗುವುದಿಲ್ಲ, ಮತ್ತು ಸ್ಥಳೀಯ ಭಾಷೆಯಲ್ಲಿ ಇದಕ್ಕೆ ಸಾಕಷ್ಟು ಪ್ರಚಾರವನ್ನು ಮಾಡಿಸಬೇಕೆಂದಿದ್ದಾರೆ.

ಹಲವಾರು ವರುಷದಿಂದ ಸಂಪ್ರದಾಯ ಮಡಿಲಲ್ಲಿ ಬೆಳೆದ ಹೆಂಗಸಿನ ಸ್ಥಿತಿಯನ್ನು ಸರಿಮಾಡಲು ಹಲವಾರು ಶತಮಾನಗಳೇ ಬೇಕೆಂದು ಅರಿತಿದ್ದರೂ ಸಾಧ್ಯವಾದಷ್ಟು ಕಾರ್ನೇಲಿಯಾ ಹೆಂಗಸರ ಏಳ್ಗೆಗೆ ಶ್ರಮಿಸಿದರು.

ಕಾರ್ನೇಲಿಯಾ ಸೊರಾಬ್ಜಿಯವರ ಕೃತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಅವರು 19ನೇ ಶತಮಾನದ ಪ್ರಮುಖ ಸಾಹಿತಿಗಳ ಗುಂಪಿಗೆ ಸೇರುವುದಿಲ್ಲ. ಆದರೆ ಸಾಹಿತ್ಯ ವಿದ್ಯಾರ್ಥಿಗಳು ಸ್ತ್ರೀಗೆ ಸಂಬಂಧಪಟ್ಟ ವಿಷಯದ ಅಭ್ಯಾಸ ಮಾಡುವಾಗ ಇವರ ಕೃತಿಗಳನ್ನು ಅಭ್ಯಾಸ ಮಾಡಬೇಕಾಗುತ್ತದೆ. ಕಾರ್ನೇಲಿಯಾ ಬರವಣಿಗೆಯನ್ನು ನೋಡುವಾಗ ನಮಗೆ ಅವರು ಸಮಾಜವಾದಿಯಂತೆ ತೋರುತ್ತಾರೆ. ಅವರಿಗಿದ್ದ ಏಕೈಕ ತೊಡಕು ಸ್ತ್ರೀಗೆ ಸಮಾನತೆ ಇಲ್ಲವಾದ ಕಾಲದ್ದು ಮತ್ತು ಹಿಂದೂಸ್ತಾನ ಬ್ರಿಟಿಷರ ಆಳ್ವಿಕೆಯಲ್ಲಿತ್ತು. ಹಿಂದೂ ಸಂಪ್ರದಾಯಕ್ಕೆ ಒಲಿದ ಹೆಂಗಸು, ತನ್ನ ಸ್ಥಾನಮಾನವನ್ನರಿತು ಅದಕ್ಕೆ ಅನುಗುಣವಾಗಿ ನಡೆಯಬೇಕೆಂಬುದು ಅವರ ಅಭಿಮತ.

ಸಾಮಾಜಿಕ ಕಾರ್ಯಕರ್ತರಿಗೆ ಮೂಢನಂಬಿಕೆ, ಅವುಗಳಿಂದ ಉಂಟಾದ ಘೋರ ಅಪಚಾರ ಇವುಗಳನ್ನು ಹೊರದಬ್ಬುವ ಕೆಲಸ ತ್ವರಿತದಲ್ಲಿ ಆಗಬೇಕಿತ್ತು. ಕಾರ್ನೇಲಿಯಾರವರ ಅಭಿಪ್ರಾಯವನ್ನು ಟೀಕಿಸಿದವರು ಬಹಲ ಮಂದಿ.

ದಿನನಿತ್ಯದಲ್ಲಿ ಕಾಣುವ, ಸಮಾಜದ ಕತ್ತಲು ಎಷ್ಟು ದಟ್ಟವಾಗಿದೆ ಎಂಬುದರ ಅರಿವು ಕಾರ್ನೇಲಿಯಾರವರಿಗೆ ಇತ್ತು. ಸಾಮಾಜಿಕ ಸುಧಾರಣೆ ಎಷ್ಟು ಅವಶ್ಯವೋ ಅಷ್ಟೇ ಕಷ್ಟದಾಯಕವೆಂದು ತಿಳಿದಿದ್ದರು. ಮೂಢನಂಬಿಕೆಯನ್ನು ಹೋಗಲಾಡಿಸುವುದು ಸುಲಭ ಸಾಧ್ಯವಲ್ಲದಿದ್ದರೂ ಕ್ರಮೇಣ ಜನರ ಮನಸ್ಸನ್ನು ಒಲಿಸಬಹುದೆಂಬ ನಂಬಿಕೆಯನ್ನು ಹೊಂದಿದ್ದರು. ಸಾಮಾನ್ಯ ಜನರೊಡನೆ ಸಮಾನವಾಗಿ ಬೆರೆತು ನಿಧಾನವಾಗಿ ಪರಿವರ್ತನೆ ಕೆಲಸ ಕೈಗೊಳ್ಳಬೇಕು. ಇದು ತ್ವರಿತದಲ್ಲಿ ಆಗಲಾರದ ಕೆಲಸವೆಂದು ತಿಳಿದಿದ್ದರು. ಸಾಮಾಜಿಕ ಸುಧಾರಣೆ ಧಣಿಯನ್ನು ಮೆಚ್ಚಿಸುವ ಪ್ರಯತ್ನವಾಗಬಾರದು. ಇದು ಅವರ ಮತ.

Purdah Nashin ಪುಸ್ತಕಕ್ಕೆ ಮುನ್ನಡಿಯನ್ನು ಬರೆದಿರುವ Countess of Minto "ಹೆಂಗಸು ತಾನಾಗಿ ಹೊರಜಗತ್ತನ್ನು ಅರಿಯುವ ತನಕ ಅವಳನ್ನು ಕಾಪಾಡಬೇಕು ... ಸ್ತ್ರೀಗೆ ಜ್ಞಾನಾರ್ಜನೆ ಅವಶ್ಯಕ. ಇಲ್ಲದಿದ್ದರೆ ಇಂಗ್ಲಿಷ್ ವಿದ್ಯಾಭ್ಯಾಸದ ಪೂರ್ಣ ಲಾಭವನ್ನು ಪಡೆಯಲು ಆಗುವುದಿಲ್ಲ".

ಸ್ವಾತಂತ್ರ್ಯ ಚಳುವಳಿಗಾರರು ಕಾರ್ನೇಲಿಯಾರವರನ್ನು ಆಂಗ್ಲರನ್ನು ಅನುಸರಿಸುವಳು ಎಂದು ತೆಗಳಿದ್ದೂ ಉಂಟು. ಆದರೆ ಆಂಗ್ಲೇಯರಿಂದ ತಮ್ಮ ವಿದ್ಯೆಗೆ ಪ್ರೋತ್ಸಾಹ ಸಿಕ್ಕಿದ್ದೂ, ಅದೂ ಚಿಕ್ಕ ವಯಸ್ಸಿನಲ್ಲಿ ಇದು ಅವರ ಮನಸ್ಸಿನ ಮೇಲೆ ಪರಿಣಾಮ ಬೀರಿದೆ. ಕಾರ್ನೇಲಿಯಾ ಹಿಂದೂಸ್ಥಾನ ಮತ್ತು ಪರದೇಶದಲ್ಲಿರುವ ನಾಗರೀಕತೆಯಲ್ಲಿನ ಮುಖ್ಯವಾದ ಅಂಶಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡರು. ಅವರಿಗೆ ಇಂಗ್ಲೆಂಡ್ ಮೇಲಿನ ಪ್ರೀತಿ ಮತ್ತು ಹಿಂದೂಸ್ಥಾನದ ಕಡೆಗಿದ್ದ ಅಭಿಮಾನ ಅವರ India calling ಪುಸ್ತಕದಲ್ಲಿ ಅಭಿವ್ಯಕ್ತವಾಗಿದೆ.

ತೀವ್ರಗಾಮಿ ಮನೋಭಾವ ಅವರ ಬರವಣಿಗೆಯಲ್ಲಿ ಕಾಣುವುದಿಲ್ಲ. 1929ರಲ್ಲಿ ವಿರಾಮಕ್ಕೆಂದು ಇಂಗ್ಲೆಂಡಿಗೆ ಹೋದಾಗ ಅಮೇರಿಕದ ವಿಲಿಯಮ್ ಟ್ರಸ್ಸ್ ಇತಿಹಾಸ ವಿಭಾಗ ಅವರನ್ನು ಆಹ್ವಾನಿಸಿತು. ಮತ್ತೆ 1930-31ರಲ್ಲಿ ಮತ್ತೆ ಸ್ವಾತಂತ್ರ ಆಂದೋಲನದ ಬಗ್ಗೆ ನಿಜಸ್ಥಿತಿಯನ್ನು ವಿವರಿಸಲು ಕರೆಸಿತ್ತು. ಕಾರ್ನೇಲಿಯಾರವರಿಗೆ ಅಮೇರಿಕಾ ಜನರ ಸೌಜನ್ಯ ಮೆಚ್ಚುಗೆಯಾಗಿತ್ತು.

1945 Dec. Times of India ಪತ್ರಿಕೆ ಕಾರ್ನೇಲಿಯಾ ಬಗ್ಗೆ ಹೀಗೆ ಬರೆಯಿತು.

"ಇಂಡಿಯಾ ದೇಶದ ಅತ್ಯಂತ ಸುಧಾರಿತ, ಸುಶಿಕ್ಷಿತ, ಕಾನೂನು ಪರಿಣಿತರಾದ 80 ವಯಸ್ಸಿನ ಕಾರ್ನೇಲಿಯಾ ಸೊರಾಬ್ಜಿ ಅತ್ಯಂತ ನಿಶ್ಯಕ್ತರಾಗಿ ಹಾಸಿಗೆ ಹಿಡಿದು ಮಲಗಿರುವರು. ಆದ್ದರಿಂದ ಅವರಿಗೆ ಮೊದಲಿನ ಹಾಗೆ ತಮ್ಮ ಕಾರ್ಯವನ್ನು ನಿರ್ವಹಿಸಲು ಸಾಧ್ಯವಾಗುತ್ತಿಲ್ಲ. ಈ ಹಿಂದೂಸ್ತಾನದ ಹೆಣ್ಣುಮಗಳು .... ಕೆಲಸ ಮಾಡಲು ಎಂದಿಗೂ ಸಾಧ್ಯವಾಗುವದಿಲ್ಲವೇನೋ ಎಂಬ ಭಯ ಉಂಟಾಗಿದೆ".

ಕಾರ್ನೇಲಿಯಾ ಎರಡು ಸಲ ಅಪಘಾತಕ್ಕೆ ಈಡಾದರು. ಕಾಲು ಮುರಿದು ಸೊಂಟದ ನೋವಿನಿಂದ 1954ರಲ್ಲಿ ಕಾಲವಾದರು. ಸಾಯುವ ಮುನ್ನ ಅವರಿಗಿದ್ದ ಏಕೈಕ ಆಸೆ ಮತ್ತೊಂದು ಪುಸ್ತಕ ಬರೆಯಬೇಕೆಂದು ಅನ್ನುತ್ತಾರೆ ಅವರ ತಂಗಿ ಡಾ॥ ವಿ.ಎಸ್. ಸೆಸಲ್.

ಸ್ವಾತಂತ್ರ್ಯ ಲಭಿಸಿ ಐದು ದಶಕ ಕಳೆದಿದೆ. ಸ್ತ್ರೀ ಶೋಷಣೆ ನಡೆದಿದೆ, ಇನ್ನೂ ನಡೆಯುತ್ತಲಿದೆ. ಸ್ತ್ರೀ ತನ್ನ ಸಂಕೋಲೆಯಿಂದ ಹೊರಬರಲು ಇನ್ನೂ ಹೆಚ್ಚಿನ ಹೋರಾಟ ಮಾಡಬೇಕು. ಇದು ಕಾರ್ನೇಲಿಯಾ ನಂಬಿದಂತೆ ಸ್ತ್ರೀಯಿಂದಲೇ ಸಾಧ್ಯ.

*ಡಾ॥ ಲೀಲಾ ಬಿ.*
ಮುಂಬೈ

## ಮನವಿ

ಕಳೆದ ಹನ್ನೊಂದು ವರ್ಷಗಳಿಂದ ನಿರಂತರವಾಗಿ ನಡೆದುಬರುತ್ತಿರುವ ಪ್ರತ್ರಿಕೆಯಾದ 'ಅಚಲ' ಮಹಿಳಾ ಜಾಗೃತಿಯ ಧ್ಯೇಯಕ್ಕೆ ಬದ್ಧವಾಗಿರುವ ದ್ವೈಮಾಸಿಕ. ಕರ್ನಾಟಕದ ಎಲ್ಲ ಭಾಗಗಳಲ್ಲಿ ನಮ್ಮ ಚಂದಾದಾರರಿದ್ದಾರೆ; ನಾಡಿನ ಅನೇಕ ಹಿರಿಯ, ಕಿರಿಯ ಚಿಂತಕರು, ವಿಚಾರವಂತರು, ಸಾಹಿತಿಗಳು ಅಭಿಮಾನವಿಟ್ಟು ನಮ್ಮ ಪತ್ರಿಕೆಗೆ ಲೇಖನಗಳನನ್ನು ಬರೆದು ಕೊಟ್ಟಿದ್ದಾರೆ, ಕೊಡುತ್ತಿದ್ದಾರೆ. ಹೀಗಾಗಿ ಆರಂಭದಿಂದ ಇಂದಿನವರೆಗೆ ಒಂದು ಉನ್ನತ ಮಟ್ಟದ ವೈಚಾರಿಕ ಲೇಖನಗಳನ್ನು, ಸಂಶೋಧನಾ ವರದಿಗಳನ್ನು ಹಲವು ಸಾಮಾಜಿಕ ಸಮಸ್ಯೆಗಳ ಚರ್ಚೆಯನ್ನು ಮಹಿಳೆಯರ ದೃಷ್ಟಿಯಿಂದ ನಾವು ಪ್ರಕಟಿಸುತ್ತಾ ಬಂದಿದ್ದೇವೆ.

ಆದರೆ ಧ್ಯೇಯಬದ್ಧ ಮಹಿಳಾ ಪತ್ರಿಕೆಗಳೇ ಅಭಾವವಾಗಿರುವ ಈ ನಾಡಿನಲ್ಲಿ 'ಅಚಲ' ದಂಥ ಪತ್ರಿಕೆಗೆ ಎಷ್ಟು ಪ್ರೋತ್ಸಾಹ ದೊರೆಯಬೇಕೋ ಅದು ಇದುವರೆಗೂ ದೊರೆತಿಲ್ಲ. ಚಂದಾಹಣವಲ್ಲದೆ ಬೇರೆ ಯಾವ ಆದಾಯಗಳೂ ನಮ್ಮ ಪತ್ರಿಕೆಗೆ ಇಲ್ಲ. ಆದ್ದರಿಂದ ಓದುಗರಲ್ಲಿ ನಾವು ವಿನಮ್ರವಾಗಿ ಭಿನ್ನವಿಸಿಕೊಳ್ಳುವುದೇನೆಂದರೆ ದಯವಿಟ್ಟು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ನಮ್ಮ ಪತ್ರಿಕೆಗೆ ಚಂದಾದಾರರಾಗಿರಿ. ಈಗಾಗಲೇ ಚಂದಾದಾರರಾಗಿರುವವರು ದಯವಿಟ್ಟು ನವೀಕರಿಸಿರಿ. ಮಹಿಳಾ ಪ್ರಗತಿಯಲ್ಲಿ ಕಳಕಳಿ ಹೊಂದಿರುವ ದಾನಿಗಳು ಉದಾರವಾಗಿ ದಾನನೀಡುವ ಮೂಲಕ ಈ ಪತ್ರಿಕೆ ಸದಾ ಉಳಿದು ಬರುವಂಥ 'ಸ್ಥಾಯಿನಿಧಿ' ಸ್ಥಾಪನೆಗೆ ನೆರವಾಗಬೇಕೆಂದು ಕೋರುತ್ತೇವೆ.

- ಸಂಪಾದಕ ಮಂಡಳಿ

**Reg. No. MAG (5) PRC, DEGL 036/89/87**
BOOK POST/Periodicals

To,
Sri / Smt.

*If Undelivered please return to :*
**Jagruthi Mahila Adhyayana Kendra**
401, Vijay Tower, 2nd Main, RPC Layout
Vijayanagar, II Stage, Bangalore-560 040.

**ACHALA** - Edited by N. Gayathri, Published by Dr. G. Ramakrishna on behalf of Jagruthi Mahila Adhyayana Kendra, 26, 1st Main Road, Vyalikaval, Bangalore-03. Typeset & Printing by **AKSHARA PRINTERS**, B'lore-4. Ph.: 624082